KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೨, ೨೦೦೬ (ಕಾರ್ತಿಕ ೧೧, ಶಕ ವರ್ಷ ೧೯೨೮) | ಸಂಚಿಕೆ ೪೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ
### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು, ಇವರ ನಡವಳಿಕೆಗಳು

**ವಿಷಯ:** ಶ್ರೀ ಡಿ. ಶುಭಾಶಯ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ಥಿಯನ್ನು ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ ತುಮಕೂರು, ಇವರ ಹೆಸರಿಗೆ ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರ ಪತ್ರ ಸಂಖ್ಯೆ: ಮಾ.ಅ. 101/ 2006-07 ದಿನಾಂಕ: 07.08.2006.

2) ಕಾರ್ಯದರ್ಶಿ/ ವ್ಯವಸ್ಥಾಪಕರು ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ., ತುಮಕೂರು ದಿನಾಂಕ:04.05.2006.

3) ಈ ಕಛೇರಿಯ ಪತ್ರ ಸಂಖ್ಯೆ: 10/ 2006-07 ದಿನಾಂಕ:31.08.2006.

**ಪ್ರಸ್ತಾವನೆ:**

ಶ್ರೀ ಡಿ. ಶುಭಾಶಯ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರು ಶ್ರೀ ಕನಕ ಪತ್ತಿನ ಸಹಕಾರ ಸಂಘ/ ಬ್ಯಾಂಕ್ ನಿ., ತುಮಕೂರು ಇಲ್ಲಿ ಸಾಲ ಪಡೆದು ಅಸಲು, ಬಡ್ಡಿ ಮತ್ತು ಇತರೇ ಖರ್ಚು ಒಟ್ಟು ರೂ.1,66,455/- ಗಳಿಗೆ ಸುಸ್ತಿಯಾಗಿದ್ದು, ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿದ್ದು. ಈ ದಾವಾ ಸಂಖ್ಯೆ 22/ 04-05 ದಿನಾಂಕ:26.07.2004 ಅವಾರ್ಡ್ ಆಗಿರುತ್ತದೆ. ಈ ನಿರ್ಣಯದ ಜಾರಿಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರೀತ್ಯಾ ಅಮಲ್ಜಾರಿಯನ್ನು ದಿನಾಂಕ:30.09.2005 ಪಡೆಯಲಾಗಿದೆ. ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಹಣವನ್ನು ಸಂಘ/ ಬ್ಯಾಂಕಿಗೆ ಮರುಪಾವತಿಸಿದೆ ಸುಸ್ತಿದಾರರಾದ ಕಾರಣದಿಂದ ಡಿಕ್ರಿ ಹಣವನ್ನು ವಸೂಲಿಮಾಡಲು ಅಮಲ್ಜಾರಿ ಸಂಖ್ಯೆ: 48/ 04-05 ದಿನಾಂಕ:30.09.2005ರಂದು ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು. ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ:21.07.2006ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದ್ದು ಹರಾಜಿನ ದಿನಾಂಕಕ್ಕೆ ಸಂಘಕ್ಕೆ/ ಬ್ಯಾಂಕಿಗೆ ಸುಸ್ತಿ ಸಾಲಗಾರರಿಂದ ಒಟ್ಟು ರೂ.1,96,302/- ಗಳು ಸಂಘಕ್ಕೆ/ ಬ್ಯಾಂಕಿಗೆ ಮರುಪಾವತಿಸಲು ಬಾಕಿ ಇರುತ್ತದೆ. ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38ರ ರೀತ್ಯಾ ದಿನಾಂಕ:21.07.2006 ಬಹಿರಂಗ ಹರಾಜು ನಡೆಸಿ ಸದರಿ ಹರಾಜಿನಲ್ಲಿ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1st ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ. ತುಮಕೂರು. ಇವರು ಭಾಗವಹಿಸಿ ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ.1,80,000/- ಗಳ ಅತ್ಯಧಿಕ ಬಿಡ್ಡು ಕೂಗಿರುವುದರಿಂದ ಸುಸ್ತಿ ಸಾಲಗಾರರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(6) (ಎ) ರನ್ವಯ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1st ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ., ತುಮಕೂರು, ಇವರಿಗೆ ಸದರಿ ಹರಾಜನ್ನು ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡಲು ಉಲ್ಲೇಖ (1) ಮತ್ತು (2)ರಲ್ಲಿ ನಮೂದಿಸಿದ ಪತ್ರದಲ್ಲಿ ಕೋರಿರುತ್ತಾರೆ. ಬಹಿರಂಗ ಹರಾಜಿನ ಮಾರಾಟದ ದಿನಾಂಕದಿಂದ 30 ದಿವಸಗಳಲ್ಲಿ ಸ್ಥಿರಾಸ್ತಿಯ ಮಾರಾಟಕ್ಕೆ ಮೊದಲು ಅದರ ಒಡೆತನ ಹೊಂದಿರುವಂತ ಅಥವಾ ಮಾರಾಟಕ್ಕೆ ಮುನ್ನ ಪಡೆದ ಸ್ವಾಮ್ಯವನ್ನು ಹೊಂದಿದ ಕಾರಣದಿಂದ ಹಕ್ಕನ್ನು ಪಡೆದವರು ಮತ್ತು ಈ ಕಛೇರಿಗೆ ನಿಯಮಾನುಸಾರ ಠೇವಣಿ ಇಟ್ಟು ಮಾರಾಟವನ್ನು ರದ್ದುಪಡಿಸಬೇಕೆಂದು ನಿಯಮ 38 (ಎ) (4)ರ ರೀತಿಯಾಗಿ ಅಥವಾ ಡಿಕ್ರಿದಾರರು ಅಥವಾ ಮಾರಾಟದಿಂದ ತನ್ನ ಹಕ್ಕಿಗೆ ಬಾಧೆಯಾದ ಯಾವುದೇ ವ್ಯಕ್ತಿಯು, ಬಹಿರಂಗ ಹರಾಜು ನಡೆಸುವಲ್ಲಿ ತಪ್ಪು ನಡೆದಿದೆ ಎಂದು 38ನೇ ನಿಯಮ 5(ಎ) ಅಡಿ ಮಾರಾಟ ರದ್ದುಪಡಿಸಬೇಕೆಂದು 30 ದಿವಸಗಳೊಳಗಾಗಿ ಯಾವುದೇ ಅರ್ಜಿ ಈ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಈ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎ.ಆರ್.ಟಿ/ ಎ.ಬಿ.ಎಸ್./ ಸಿ.ಆರ್.-08/ 06-07, ದಿನಾಂಕ:4ನೇ ಸೆಪ್ಟೆಂಬರ್, 2006**

ಶ್ರೀ ಮುರುಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38 (6) (ಎ) ರನ್ವಯ ಹಾಗೂ ಕರ್ನಾಟಕ ಸಹಕಾರ ಸಂಘಗಳ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ. 69. ಸಿ.ಎಲ್.ಎಂ/ 2001 ದಿನಾಂಕ:21.11.2001 ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ. ಶುಭಾಶಯ S/o ಎಸ್. ದೊಡ್ಡಣ್ಣ ಒಡೆಯರ್, ಮುನ್ಸಿಪಲ್ ಲೇಔಟ್ ತುಮಕೂರು ಇವರ ಸ್ಥಿರಾಸ್ತಿಯ ಷೆಡ್ಯೂಲ್‌ನಲ್ಲಿ ವಿವರಿಸಲಾದ ನಿವೇಶನ ಇರುವ ಸ್ಥಿರಾಸ್ತಿಯನ್ನು ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ., ತುಮಕೂರು, ಇವರ ಹೆಸರಿಗೆ ನಿಲ್ಲಿಸಿ ಬಹಿರಂಗ ಹರಾಜು ಮಾರಾಟ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಮತ್ತು ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(7) ರೀತ್ಯಾ, ಮಾರಾಟ ಮಾಡಲಾದ ಆಸ್ತಿಯ ಮತ್ತು ಖರೀದಿದಾರನ ಹೆಸರನ್ನೊಳಗೊಂಡ ಆಸ್ತಿಯ ಮಾರಾಟದ ಬಗ್ಗೆ ನಿರ್ಣಾಯಿತ ಸಾಕ್ಷಿಯಾಗಿ ನೀಡಿದ ಪ್ರಮಾಣ ಪತ್ರವನ್ನು ಲಗತ್ತಿಸಿ ಆದೇಶಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಹಸ್ತಾಕ್ಷರದೊಂದಿಗೆ ದಿನಾಂಕ:04.09.2006ರಂದು ಈ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

**ಸ್ಥಿರ -ಸ್ವತ್ತಿನ ಷೆಡ್ಯೂಲ್**

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.762/ 762 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ. 75/1ಎ ರಲ್ಲಿದ್ದ ಸೈಟ್ ನಂ.3 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: 40 ಅಡಿಗಳು, ಉತ್ತರ-ದಕ್ಷಿಣ:30 ಅಡಿಗಳು, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.4, ದಕ್ಷಿಣಕ್ಕೆ: ಸೈಟ್ ನಂ.2 ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

**ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38(7) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರನ್ವಯ ಮಾರಾಟದ ಬಗ್ಗೆ ಪ್ರಮಾಣ ಪತ್ರ**

**ಸ್ಥಿರಸ್ವತ್ತಿನ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿದ ಸ್ಥಿರೀಕರಣದ ಪ್ರಮಾಣ ಪತ್ರ**

ಶ್ರೀ ಡಿ. ಶುಭಾಶಯ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಆದೇಶವನ್ನು ಕಲಂ 101 ರೀತ್ಯಾ ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರಸ್ವತ್ತುಗಳನ್ನು ದಿನಾಂಕ:04.09.2006ರಂದು ಈ ಕಛೇರಿಯ ಆದೇಶದಡಿಯಲ್ಲಿ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ತುಮಕೂರು, ಇವರ ಹೆಸರಿಗೆ ಹರಾಜನ್ನು ಖಾಯಂ ಮಾಡಿ ದೃಢೀಕರಣ ಆದೇಶ ನೀಡಿದೆ. ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಸ್ವಾಮ್ಯ, ಅಧಿಕಾರ, ನಾಮ, ಮತ್ತು ಬಾಧ್ಯತೆ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣಾನಗರ, ತುಮಕೂರು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರನ್ವಯ ಪ್ರಮಾಣ ಪತ್ರ ನೀಡಿದೆ.

ಶ್ರೀ ಡಿ. ಶುಭಾಶಯ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು ಇವರ

**ಸ್ವತ್ತಿನ ವಿವರ**

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.762/ 762 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ.75/ 1ಎ ರಲ್ಲಿದ್ದ ಸೈಟ್ ನಂ.4 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: 40 ಅಡಿಗಳು, ಉತ್ತರ-ದಕ್ಷಿಣದ: 30 ಅಡಿಗಳು, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ: 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.4 ದಕ್ಷಿಣಕ್ಕೆ: ಸೈಟ್ ನಂ.2 ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.1482

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು, ಇವರ ನಡವಳಿಕೆಗಳು**

**ವಿಷಯ:** ಶ್ರೀಮತಿ ಡಿ. ಸೀಮಾ D/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ಥಿಯನ್ನು ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ ತುಮಕೂರು, ಇವರ ಹೆಸರಿಗೆ ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರ ಪತ್ರ ಸಂಖ್ಯೆ: ಮಾ.ಅ. 101/ 2006-07 ದಿನಾಂಕ: 07.08.2006.

2) ಕಾರ್ಯದರ್ಶಿ/ ವ್ಯವಸ್ಥಾಪಕರು ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ., ತುಮಕೂರು ದಿನಾಂಕ:04.05.2006.

3) ಈ ಕಛೇರಿಯ ಪತ್ರ ಸಂಖ್ಯೆ: 10/ 2006-07 ದಿನಾಂಕ:31.08.2006.

**ಪ್ರಸ್ತಾವನೆ:**

ಶ್ರೀಮತಿ ಡಿ. ಸೀಮಾ D/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರು ಶ್ರೀ ಕನಕ ಪತ್ತಿನ ಸಹಕಾರ ಸಂಘ/ ಬ್ಯಾಂಕ್ ನಿ., ತುಮಕೂರು ಇಲ್ಲಿ ಸಾಲ ಪಡೆದು ಅಸಲು, ಬಡ್ಡಿ ಮತ್ತು ಇತರೇ ಖರ್ಚು ಒಟ್ಟು ರೂ.1,88,865/- ಗಳಿಗೆ ಸುಸ್ತಿಯಾಗಿದ್ದು, ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿದ್ದು. ಈ ದಾವಾ ಸಂಖ್ಯೆ 23/ 04-05 ದಿನಾಂಕ:18.06.2004 ಅವಾರ್ಡ್ ಆಗಿರುತ್ತದೆ. ಈ ನಿರ್ಣಯದ ಜಾರಿಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರೀತ್ಯಾ ಅಮಲ್ಜಾರಿಯನ್ನು ದಿನಾಂಕ:14.06.2005 ಪಡೆಯಲಾಗಿದೆ. ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಹಣವನ್ನು ಸಂಘ/ ಬ್ಯಾಂಕಿಗೆ ಮರುಪಾವತಿಸಿದೆ ಸುಸ್ತಿದಾರರಾದ ಕಾರಣದಿಂದ ಡಿಕ್ರಿ ಹಣವನ್ನು ವಸೂಲಿಮಾಡಲು ಅಮಲ್ಜಾರಿ ಸಂಖ್ಯೆ: 49/ 04-05 ದಿನಾಂಕ:14.06.2005ರಂದು ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು. ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ:21.07.2006ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದ್ದು ಹರಾಜಿನ ದಿನಾಂಕಕ್ಕೆ ಸಂಘಕ್ಕೆ/ ಬ್ಯಾಂಕಿಗೆ ಸುಸ್ತಿ ಸಾಲಗಾರರಿಂದ ಒಟ್ಟು ರೂ.1,80,000/- ಗಳು ಸಂಘಕ್ಕೆ/ ಬ್ಯಾಂಕಿಗೆ ಮರುಪಾವತಿಸಲು ಬಾಕಿ ಇರುತ್ತದೆ. ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38ರ ರೀತ್ಯಾ ದಿನಾಂಕ:21.07.2006 ಬಹಿರಂಗ ಹರಾಜು ನಡೆಸಿ ಸದರಿ ಹರಾಜಿನಲ್ಲಿ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1st ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ. ತುಮಕೂರು. ಇವರು ಭಾಗವಹಿಸಿ ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ.1,80,000/- ಗಳ ಅತ್ಯಧಿಕ ಬಿಡ್ಡು ಕೂಗಿರುವುದರಿಂದ ಸುಸ್ತಿ ಸಾಲಗಾರರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(6) (ಎ) ರನ್ವಯ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1st ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ., ತುಮಕೂರು, ಇವರಿಗೆ ಸದರಿ ಹರಾಜನ್ನು ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡಲು ಉಲ್ಲೇಖ (1) ಮತ್ತು (2)ರಲ್ಲಿ ನಮೂದಿಸಿದ ಪತ್ರದಲ್ಲಿ ಕೋರಿರುತ್ತಾರೆ. ಬಹಿರಂಗ ಹರಾಜಿನ ಮಾರಾಟದ ದಿನಾಂಕದಿಂದ 30 ದಿವಸಗಳಲ್ಲಿ ಸ್ಥಿರಾಸ್ತಿಯ ಮಾರಾಟಕ್ಕೆ ಮೊದಲು ಅದರ ಒಡೆತನ ಹೊಂದಿರುವಂತ ಅಥವಾ ಮಾರಾಟಕ್ಕೆ ಮುನ್ನ ಪಡೆದ ಸ್ವಾಮ್ಯವನ್ನು ಹೊಂದಿದ ಕಾರಣದಿಂದ ಹಕ್ಕನ್ನು ಪಡೆದವರು ಮತ್ತು ಈ ಕಛೇರಿಗೆ ನಿಯಮಾನುಸಾರ ಠೇವಣಿ ಇಟ್ಟು ಮಾರಾಟವನ್ನು ರದ್ದುಪಡಿಸಬೇಕೆಂದು ನಿಯಮ 38 (ಎ) (4)ರ ರೀತಿಯಾಗಿ ಅಥವಾ ಡಿಕ್ರಿದಾರರು ಅಥವಾ ಮಾರಾಟದಿಂದ ತನ್ನ ಹಕ್ಕಿಗೆ ಬಾಧೆಯಾದ ಯಾವುದೇ ವ್ಯಕ್ತಿಯು, ಬಹಿರಂಗ ಹರಾಜು ನಡೆಸುವಲ್ಲಿ ತಪ್ಪು ನಡೆದಿದೆ ಎಂದು 38ನೇ ನಿಯಮ 5(ಎ) ಅಡಿ ಮಾರಾಟ ರದ್ದುಪಡಿಸಬೇಕೆಂದು 30 ದಿವಸಗಳೊಳಗಾಗಿ ಯಾವುದೇ ಅರ್ಜಿ ಈ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಈ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎ.ಆರ್.ಟಿ/ ಎ.ಬಿ.ಎಸ್./ ಸಿ.ಆರ್.-07/ 06-07, ದಿನಾಂಕ:4ನೇ ಸೆಪ್ಟೆಂಬರ್, 2006**

ಶ್ರೀ ಮುರುಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38 (6) (ಎ) ರನ್ವಯ ಹಾಗೂ ಕರ್ನಾಟಕ ಸಹಕಾರ ಸಂಘಗಳ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ. 69. ಸಿ.ಎಲ್.ಎಂ/ 2001 ದಿನಾಂಕ:21.11.2001 ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಡಿ. ಸೀಮಾ D/o ಎಸ್. ದೊಡ್ಡಣ್ಣ ಒಡೆಯರ್, ಮುನ್ಸಿಪಲ್ ಲೇಔಟ್ ತುಮಕೂರು, ಇವರ ಸ್ಥಿರಾಸ್ತಿಯ ಷೆಡ್ಯೂಲ್‌ನಲ್ಲಿ ವಿವರಿಸಲಾದ ನಿವೇಶನ ಇರುವ ಸ್ಥಿರಾಸ್ತಿಯನ್ನು ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ಎಸ್.ಐ.ಟಿ., ತುಮಕೂರು, ಇವರ ಹೆಸರಿಗೆ ನಿಲ್ಲಿಸಿ ಬಹಿರಂಗ ಹರಾಜು ಮಾರಾಟ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಮತ್ತು ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(7) ರೀತ್ಯಾ, ಮಾರಾಟ ಮಾಡಲಾದ ಆಸ್ತಿಯ ಮತ್ತು ಖರೀದಿದಾರನ ಹೆಸರನ್ನೊಳಗೊಂಡ ಆಸ್ತಿಯ ಮಾರಾಟದ ಬಗ್ಗೆ ನಿರ್ಣಾಯಿತ ಸಾಕ್ಷಿಯಾಗಿ ನೀಡಿದ ಪ್ರಮಾಣ ಪತ್ರವನ್ನು ಲಗತ್ತಿಸಿ ಆದೇಶಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಹಸ್ತಾಕ್ಷರದೊಂದಿಗೆ ದಿನಾಂಕ:04.09.2006ರಂದು ಈ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

**ಸ್ಥಿರ -ಸ್ವತ್ತಿನ ಷೆಡ್ಯೂಲ್**

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.763/ 763 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ. 75/1ಎ ರಲ್ಲಿದ್ದ ಸೈಟ್ ನಂ.4 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: 40 ಅಡಿಗಳು, ಉತ್ತರ-ದಕ್ಷಿಣ:30 ಅಡಿಗಳು, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.5, ದಕ್ಷಿಣಕ್ಕೆ: ಸೈಟ್ ನಂ.3 ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

**ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38(7) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರನ್ವಯ ಮಾರಾಟದ ಬಗ್ಗೆ ಪ್ರಮಾಣ ಪತ್ರ**

**ಸ್ಥಿರಸ್ವತ್ತಿನ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿದ ಸ್ಥಿರೀಕರಣದ ಪ್ರಮಾಣ ಪತ್ರ**

ಶ್ರೀಮತಿ ಡಿ. ಸೀಮಾ D/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಆದೇಶವನ್ನು ಕಲಂ 101 ರೀತ್ಯಾ ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರಸ್ವತ್ತುಗಳನ್ನು ದಿನಾಂಕ:04.09.2006ರಂದು ಈ ಕಛೇರಿಯ ಆದೇಶದಡಿಯಲ್ಲಿ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣನಗರ, ತುಮಕೂರು, ಇವರ ಹೆಸರಿಗೆ ಹರಾಜನ್ನು ಖಾಯಂ ಮಾಡಿ ದೃಢೀಕರಣ ಆದೇಶ ನೀಡಿದೆ. ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು,

ಸ್ವಾಮ್ಯ, ಅಧಿಕಾರ, ನಾಮ, ಮತ್ತು ಬಾಧ್ಯತೆ ಶ್ರೀ ರಂಗರಾಮಣ್ಣ ಬಿನ್ ರಂಗೇಗೌಡ 1ನೇ ಮೈನ್ ಶ್ರೀನಿವಾಸ ಕಲ್ಯಾಣ ಮಂದಿರ ರಸ್ತೆ, ಕೃಷ್ಣಾನಗರ, ತುಮಕೂರು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರನ್ವಯ ಪ್ರಮಾಣ ಪತ್ರ ನೀಡಿದೆ.

ಶ್ರೀಮತಿ ಡಿ. ಸೀಮಾ D/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು ಇವರ

**ಸ್ವತ್ತಿನ ವಿವರ**

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.763/ 763 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ.75/ 1ಎ ರಲ್ಲಿದ್ದ ಸೈಟ್ ನಂ.4 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: 40 ಅಡಿಗಳು, ಉತ್ತರ-ದಕ್ಷಿಣದ: 30 ಅಡಿಗಳು, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ: 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.5 ದಕ್ಷಿಣಕ್ಕೆ: ಸೈಟ್ ನಂ.3 ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.1483

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು, ಇವರ ನಡವಳಿಕೆಗಳು

**ವಿಷಯ:** ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ಥಿಯನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸ್ತಿಯನ್ನು ಪುನರ್ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಎ.ಬಿ.ಎನ್.ಸಿ.ಆರ್/ 882/ 2001-02, ದಿನಾಂಕ:13.01.2000.

2) ವ್ಯವಸ್ಥಾಪಕರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರ ಕ್ರ.ಸಂ. 79/2006-07, ದಿನಾಂಕ:12.06.2006 ಮತ್ತು ಪತ್ರ ಸಂಖ್ಯೆ: 164/ 2006-07, ದಿನಾಂಕ:11.08.2006.

**ಪ್ರಸ್ತಾವನೆ:**

ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು ಇವರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಕೊಳವೆ ಬಾವಿ ಮುಳುಗಡೆ ಯಂತ್ರ ಯೋಜನೆಯಲ್ಲಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು ಒಟ್ಟು ರೂ.72,000-00 ಗಳಿಗೆ ವಸೂಲಾತಿ ಡಿಕ್ರಿ ಆದೇಶ ಪಡೆದು ಅಮಲ್ಜಾರಿ ಸಂಖ್ಯೆ: 430/ 1388/ 99-2000 ರೀತ್ಯಾ ಅಮಲ್ಜಾರಿ ಪಡೆಯಲಾಗಿದ್ದರ ಮೇರೆಗೆ ದಿನಾಂಕ:20.02.2000 ರಂದು ಬ್ಯಾಂಕಿನ ಮಾರಾಟಾಧಿಕಾರಿಗಳು ಬಹಿರಂಗವಾಗಿ ಇವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1)ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ತರುವಾಯ ಸದರಿ ಬ್ಯಾಂಕಿನ ವ್ಯವಸ್ಥಾಪಕರು ದಿನಾಂಕ:12.06.2006 ರಂದು ಉಲ್ಲೇಖ ಪತ್ರ (2)ರಲ್ಲಿ ಸದರಿ ಸಾಲಗಾರರು ದಿನಾಂಕ:13.06.2005 ರಂದು ರಸೀತಿ ಸಂಖ್ಯೆ: 2797ರ ಪ್ರಕಾರ ಸದರಿ ಬ್ಯಾಂಕಿಗೆ ಬಾಕಿಯಿರುವ ಸಾಲದ ಮೊತ್ತವನ್ನು ಪಾವತಿಸಿರುವುದಾಗಿ ವ್ಯವಸ್ಥಾಪಕರು ದಿನಾಂಕ:12.06.2006ರಂದು ಸಾಲ ತೀರುವಳಿ ಮಾಡಿರುತ್ತಾರೆ. ಸದರಿಯವರಿಗೆ ಸಾಲ ತೀರುವಳಿ ದೃಢೀಕರಣ ಪತ್ರ ನೀಡಲಾಗಿದೆ. ಹಾಗೂ ಬ್ಯಾಂಕಿನ ಆಡಳಿತ ಮಂಡಳಿ ಸಭೆ ದಿನಾಂಕ:02.06.2006ರಂದು ನಡೆದ ಸಭೆಯ ನಡವಳಿಕೆಯಲ್ಲಿ, ಸದರಿ ಪೂರ ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು ಇವರ ಹೆಸರಿಗೆ ವರ್ಗಾವಣೆ ಮಾಡಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಸದರಿಯವರ ಹೆಸರಿಗೆ ವರ್ಗಾಯಿಸುವಂತೆ ಮನವಿಯನ್ನು ಮಾಡಿಕೊಂಡಿರುತ್ತಾರೆ.

ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:13.01.2000ರಂದು ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಪುನರ್ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎ.ಆರ್.ಟಿ/ ಎ.ಬಿ.ಎಸ್./ ಸಿ.ಆರ್.-882/ 01-02, ದಿನಾಂಕ:21ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಗಮನಿಸಿ ಶ್ರೀ ಟಿ. ಮುರುಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38(ಎ) 15 ರನ್ವಯ ಹಾಗೂ ಕರ್ನಾಟಕ ಸಹಕಾರ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/ 69/ ಸಿಸಿಎಂ/ 2001 ದಿನಾಂಕ:21.11.2001ರ ರೀತ್ಯಾ ಪ್ರತ್ಯಾಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ, ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು, ಅಸಲೀಪುರ ಗ್ರಾಮದ ಸರ್ವೆ ನಂ.1/3ಎ ವಿಸ್ತೀರ್ಣ 4.23 ಖುಷ್ಕಿ ಜಮೀನು ಇರುವ ಸ್ಥಿರಾಸ್ತಿಯನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ನೀಡಿದ ಆದೇಶವನ್ನು ಹಿಂತೆಗೆದುಕೊಂಡು ಸದರಿ ಸ್ಥಿರಾಸ್ತಿಯನ್ನು ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು ಇವರ ಹೆಸರಿಗೆ ನಿಲ್ಲಿಸಿ, ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರ ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ಪತ್ರವನ್ನು ಅಲಾಯಿದೆ ಲಗತ್ತಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ:21.08.2006ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ನಮೂನೆ-VIII

## ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(ಎ) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಪರಬಾರೆ ಬಗ್ಗೆ ಪ್ರಮಾಣ ಪತ್ರ

## ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಅಸಲೀಪುರ ಗ್ರಾಮದ, ಶ್ರೀ ನರಸಿಂಹಯ್ಯ (ಪವತಿ), ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:13.02.2002 ರಂದು ಈ ಕಛೇರಿ ಆದೇಶದ ಅಡಿಯಲ್ಲಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು ಅಧಿಕಾರ, ನಾನು ಮತ್ತು ಬಾಧ್ಯತೆ ಶ್ರೀ ನರಸಿಂಹಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಅಸಲೀಪುರ, ತುಮಕೂರು ತಾಲ್ಲೂಕು ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಮತ್ತು ಈ ಆದೇಶ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗೆ ಒಳಪಟ್ಟು ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101ರ ಪ್ರಕಾರ ಅನ್ವಯ ಈ ಮೇಲಿನ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂ. | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| ಅಸಲೀಪುರ | 1/3 ಎ | 4.23 | ಖುಷ್ಕಿ | ಶ್ರೀ ನರಸಿಂಹಯ್ಯ ಬಿನ್ ಕಂಬಯ್ಯ (ಪವತಿ) ಹೆಂಡತಿ ಶ್ರೀಮತಿ ಸಿದ್ದಗಂಗಮ್ಮ ಕೋಂ ನರಸಿಂಹಯ್ಯ. |

ಪಿ.ಆರ್.1484

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರಂ ಇವರ ನಡವಳಿಕೆಗಳು

**ವಿಷಯ:** ಸಂಖ್ಯೆ: ಎ.ಆರ್.46: 33:2004-05ಕ್ಕೆ ಸಂಬಂಧಿಸಿದ ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ, ಕನಕಪುರ ರವರ ಸ್ಥಿರಾಸ್ತಿಯನ್ನು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ.,ಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರ ರವರ ಪತ್ರ ಸಂಖ್ಯೆ: ಸಸಸನಿರಾ: 46: ಅಮಲ್ಜಾರಿ: 05-06 ದಿನಾಂಕ:31.03.2006.

2) ಈ ಕಛೇರಿಯ ನೋಟೀಸು ಸಂಖ್ಯೆ: ಸಸಸನಿರಾ: 46: ಸಿಇಪಿ:33: 2004-05 ದಿನಾಂಕ:22.06.2006.

**ಪ್ರಸ್ತಾವನೆ:**

ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ, ನಂ.122, ಬಸವನಗುಡಿ ಬೀದಿ, ಪೇಟೆ, ಕನಕಪುರ ರವರು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಈ ಸಂಘದಲ್ಲಿ ಸಾಲ ಪಡೆದು ಸುಸ್ತಿದಾರರಾದ ಪ್ರಯುಕ್ತ ದಾವಾ ಸಂಖ್ಯೆ: ಸಸಸನಿರಾ: 46: ವ್ಯಾಜ್ಯ: 14: 2003-04ರನ್ವಯ ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: ಎಆರ್: 46:33: 2004-05ರ ರೀತ್ಯ ಕ್ರಮ ಜರುಗಿಸಿ ಅಮಲ್ಜಾರಿ ಬಾಕಿ ರೂ.86,856-00 (ರೂ.ಎಂಭತ್ತಾರು ಸಾವಿರದ ಎಂಟುನೂರ ಐವತ್ತಾರು ಮಾತ್ರ) ಗಳನ್ನು ವಸೂಲಿ ಮಾಡಲು ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ ರವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 21.10.2005ನ್ನು ನಿಗದಿಗೊಳಿಸಲಾಗಿತ್ತು. ಆದರೆ ದಿನಾಂಕ:18.10.2005ರಂದು ಸಾಲಗಾರರು ರೂ.20,000-00 (ರೂ. ಇಪ್ಪತ್ತು ಸಾವಿರಗಳು ಮಾತ್ರ) ಗಳನ್ನು ಪಾವತಿಸಿ ಒಂದು ತಿಂಗಳ ಕಾಲಾವಕಾಶ ಕೋರಿದ ಮೇರೆಗೆ ಅವರ ವಿರುದ್ಧ ಕ್ರಮ ಜರುಗಿಸದೆ ಹರಾಜು ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ಮುಂದೂಡಲಾಗಿತ್ತು.

ಆದರೆ ಸಾಲಗಾರರು ಅವರೇ ತಿಳಿಸಿದ ದಿನಾಂಕದಲ್ಲಿ ಬಾಕಿ ಹಣವನ್ನು ಸಂಘಕ್ಕೆ ಮರುಪಾವತಿಸದ ಪ್ರಯುಕ್ತ ಪುನಃ ಹರಾಜನ್ನು ದಿನಾಂಕ:27.02.2006ಕ್ಕೆ ನಿಗದಿಗೊಳಿಸಿ ಪ್ರಚಾರ ಪಡಿಸಲಾಗಿತ್ತು. ಅದರ ಆ ದಿನಾಂಕಕ್ಕೆ ಮೊದಲು ಅಥವಾ ಆ ದಿನಾಂಕದಂದೂ ಸಹ ಸಾಲಗಾರರು ಸಾಲವನ್ನು ಸಂಘಕ್ಕೆ ಮರುಪಾವತಿ ಮಾಡಲಿಲ್ಲ. ಅಲ್ಲದೆ ಹರಾಜಿನಲ್ಲಿ ಬಿಡ್ಡುದಾರರು ಯಾರೂ ಭಾಗವಹಿಸಲಿಲ್ಲ. ಆ ಪ್ರಯುಕ್ತ ಶ್ರೀಮತಿ ಪದ್ಮ ಕೋಂ ಕೆಂಪಾಚಾರಿರವರಿಂದ ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಈ ಸಂಘಕ್ಕೆ ಬರಬೇಕಾದ ರೂ.86,856-00 (ರೂ. ಎಂಭತ್ತಾರು ಸಾವಿರದ ಎಂಟುನೂರು ಐವತ್ತಾರು ಮಾತ್ರ) ಗಳಿಗೆ ಅವರ ಸ್ಥಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1)ರಲ್ಲಿ ಮಾರಾಟಾಧಿಕಾರಿಗಳು ಕೋರಿರುತ್ತಾರೆ.

ಮಾರಾಟಾಧಿಕಾರಿಗಳ ಶಿಫಾರಸ್ಸಿನ ಬಗ್ಗೆ ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ ರವರು ದಿನಾಂಕ: 29.07.2006ರಂದು ಬೆಳಿಗ್ಗೆ 11 ಗಂಟೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ನ್ಯಾಯಾಲಯದಲ್ಲಿ ಹಾಜರಾಗಿ ಅವರ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಿ ಉಲ್ಲೇಖ (2)ರ ನೋಟೀಸನ್ನು ಅಂಚೆ ನೊಂದಣಿ ಮೂಲಕ ಜಾರಿ ಮಾಡಲಾಗಿತ್ತು. ಆದರೆ ಸದರಿ ನೋಟೀಸು ಜಾರಿಯಾಗದ ಪ್ರಯುಕ್ತ ನ್ಯಾಯಾಲಯಕ್ಕೆ ಹಿಂತಿರುಗಿರುತ್ತದೆ. ಈ ಹಿನ್ನೆಲೆಯಲ್ಲಿ ಮಾರಾಟಾಧಿಕಾರಿಗಳ ಶಿಫಾರಸ್ಸಿನಂತೆ ತೀರ್ಪು ಸಾಲಗಾರರ ಸ್ಥಿರಾಸ್ತಿಯನ್ನು ಸಂಘಕ್ಕೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

## ಆದೇಶ

**ಕ್ರಮ ಸಂಖ್ಯೆ: ಸಸಸನಿರಾ: 46: ಅ. ವರ್ಗಾವಣೆ:02: 2006-07, ದಿನಾಂಕ:12ನೇ ಸೆಪ್ಟೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಪಟ್ಟಣಶೆಟ್ಟಿ ಸಿ.ಐ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರಂ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ನಿಯಮ 38ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ

ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ: 69: ಸಿಎಲ್‌ಎಂ: 2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ ನಂ.122, ಬಸವನಗುಡಿ ಬೀದಿ, ಪೇಟೆ, ಕನಕಪುರ ರವರ ಈ ಕೆಳಕಂಡ ಸ್ಥಿರ ಸ್ವತ್ತನ್ನು ದಿನಾಂಕ:27.02.2006ರಂದು ಬಹಿರಂಗ ಹರಾಜಿನಲ್ಲಿ ಸಂಘಕ್ಕೆ ಬರಬೇಕಾದ ರೂ.86,856-00 (ರೂ. ಎಂಭತ್ತಾರು ಸಾವಿರದ ಎಂಟುನೂರ ಐವತ್ತಾರು ಮಾತ್ರ)ಗಳಿಗೆ ಹರಾಜು ಮಾಡಲು ಬಿಡ್ಡುದಾರರು ಯಾರೂ ಭಾಗವಹಿಸದ ಪ್ರಯುಕ್ತ ಸದರಿ ಸ್ವತ್ತನ್ನು ಈ ಕೆಳಕಂಡ ಷರತ್ತುಗಳೊಡನೆ ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಈ ಸಂಘದ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ. ಹಾಗೂ ಸಹಕಾರ ಸಂಘಗಳ ಕಾಯ್ದೆಯನ್ವಯ ನಿಗದಿತ ನಮೂನೆ:VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, ಪೇಟೆ, ಬಸವನಗುಡಿ ಬೀದಿಯಲ್ಲಿರುವ ಪುರಸಭಾ ಖಾ.ಸಂ. ಹಳೆಯ: 1988: 1874 ಹೊಸ 2500:2560ಕ್ಕೆ ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರಿನ ಹೆಂಚಿನ ಮನೆ, ಆರ್.ಸಿ.ಸಿ. ವಾಸದ ಮನೆ ಮತ್ತು ಅದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ವಿಸ್ತೀರ್ಣ:**

ಪೂರ್ವ: ಪಶ್ಚಿಮ: 14 ಅಡಿಗಳು.

ಉತ್ತರ: ದಕ್ಷಿಣ : 70 ಅಡಿಗಳು.

**ಸ್ವತ್ತಿನ ಚೆಕ್ಕುಬಂದಿ:**

ಪೂರ್ವಕ್ಕೆ: ಕೆಂಪಯ್ಯನವರ ಸ್ವತ್ತು.

ಪಶ್ಚಿಮಕ್ಕೆ: ಕೆಂಪಯ್ಯನವರ ಸ್ವತ್ತು.

ಉತ್ತರಕ್ಕೆ: ಬಸವನಗುಡಿ ರಸ್ತೆ.

ದಕ್ಷಿಣಕ್ಕೆ: ಪೊಲೀಸ್ ದಾಸಪ್ಪನವರ ಸ್ವತ್ತು.

**ಷರತ್ತುಗಳು ಹಾಗೂ ನಿಯಮಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಸಂಘವು ಉಪಯೋಗಿಸಿಕೊಳ್ಳುವುದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘಕ್ಕೆ ಜಮಾ-ಖರ್ಚು ಮಾಡಿಕೊಳ್ಳತಕ್ಕದ್ದು.

4) ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:12.09.2006ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪವಿಭಾಗ, ರಾಮನಗರಂ.

**ನಮೂನೆ-VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಕಾರ್ಯದರ್ಶಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1956ರ ಕಲಂ 71ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀಮತಿ ಪದ್ಮ ಕೋಂ ಕೆಂಪಾಚಾರಿ ನಂ.122 ಬಸವನಗುಡಿ ಬೀದಿ, ಪೇಟೆ ಕನಕಪುರ ಇವರ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಭಾದ್ಯತೆಯು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಕನಕಪುರ ಈ ಸಂಘಕ್ಕೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಅಧಿನಿಯಮ 101ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ:**

ಕನಕಪುರ ಟೌನ್, ಪೇಟೆ, ಬಸವನಗುಡಿ ಬೀದಿಯಲ್ಲಿರುವ ಪುರಸಭಾ ಖಾ.ಸಂ. ಹಳೆಯ:1988:1874 ಹೊಸ 2500:2560ಕ್ಕೆ ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರಿನ ಹೆಂಚಿನ ಮನೆ, ಆರ್.ಸಿ.ಸಿ. ವಾಸದ ಮನೆ ಮತ್ತು ಅದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ಸ್ವತ್ತಿನ ವಿಸ್ತೀರ್ಣ:**

ಪೂರ್ವ: ಪಶ್ಚಿಮ: 14 ಅಡಿಗಳು.

ಉತ್ತರ: ದಕ್ಷಿಣ : 70 ಅಡಿಗಳು.

**ಸ್ವತ್ತಿನ ಚೆಕ್ಕುಬಂದಿ:**

ಪೂರ್ವಕ್ಕೆ: ಕೆಂಪಯ್ಯನವರ ಸ್ವತ್ತು.

ಪಶ್ಚಿಮಕ್ಕೆ: ಕೆಂಪಯ್ಯನವರ ಸ್ವತ್ತು.

ಉತ್ತರಕ್ಕೆ: ಬಸವನಗುಡಿ ರಸ್ತೆ.

ದಕ್ಷಿಣಕ್ಕೆ: ಪೊಲೀಸ್ ದಾಸಪ್ಪನವರ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.1485 ರಾಮನಗರಂ ಉಪವಿಭಾಗ, ರಾಮನಗರಂ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಬಿಎಲ್‌ಆರ್:ಸಿಆರ್-176/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಶ್ರೀಮತಿ ಆಶಾಭೀ W/o ಲೇಟ್ ಹುಸೇನ್‌ಸಾಬ್ ಜಾಮ್ಮಿಯಾ ಮಸಿದಿ, ಪಿಂಜಾರಓಣಿ, ಬಳ್ಳಾರಿ.

**ಪ್ರತಿವಾದಿಗಳು**

1) ಮಹೇಶ್ ಅಗಿವಾಲ್ S/o ರಾಮ್ ಪ್ರಸಾದ್, ಮ್ಯಾನೇಜಿಂಗ್ ಡೈರೆಕ್ಟರ್ ರಾಮೇಶ್ವರಿ ಎಂಟರ್‌ಪ್ರೈಸಸ್, ಎಸ್.ಆರ್.ಆರ್. ಟಾಕೀಸ್, ಬಳ್ಳಾರಿ.

2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕರಣೆ**

ಶ್ರೀಮತಿ ಆಶಾಬೀ S/o ಹೊನ್ನುರುವಲಿ ಇವರ ತಾಯಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹೊನ್ನೂರುವಲಿ ರವರು ಒಂದನೇ ಪ್ರತಿವಾದಿಗಳಾದ ರಾಮೇಶ್ವರಿ ಎಂಟರ್ ಪ್ರೈಸಸ್, ಇವರ ಬಿಲ್ಡಿಂಗ್ ಕಟ್ಟಡದಲ್ಲಿ ಸೆಂಟ್ರಿಂಗ್ ಬೀಮ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1487

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಬಿಎಲ್‌ಆರ್: ಸಿಆರ್-174/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಶ್ರೀಮತಿ ನಾಗೇಂದ್ರಮ್ಮ ಕೋಂ ಲೇಟ್: ಸಿ.ಎಂ. ತಿಪ್ಪೇಸ್ವಾಮಿ.
2) ಚಂದನ ಡಿ/ಆಫ್ ಲೇ: ಸಿ.ಎಂ. ತಿಪ್ಪೇಸ್ವಾಮಿ,
ಇಬ್ಬರ ವಾಸ: ಕೇರ್ ಆಫ್ ರಾಮಲಿಂಗಪ್ಪ, ಓ.ಪಿ.ಡಿ. ಕ್ವಾಟ್ರಾಸ್, ಬಳ್ಳಾರಿ.

**ಪ್ರತಿವಾದಿಗಳು**

1) ಡಿವಿಜನಲ್ ಕಂಟ್ರೋಲರ್, ಕೆ.ಎಸ್.ಆರ್.ಟಿ.ಸಿ., ಬಳ್ಳಾರಿ.

**ಪ್ರಕರಣೆ**

ಶ್ರೀಮತಿ ನಾಗೇಂದ್ರಮ್ಮ ಚಂದನ ಇವರು ಮೃತ ಸಿ.ಎಂ. ತಿಪ್ಪೇಸ್ವಾಮಿ ಇವರ ಹೆಂಡತಿ ಮತ್ತು ಮಗಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿ.ಎಂ. ತಿಪ್ಪೇಸ್ವಾಮಿ ರವರು ಒಂದನೇ ಪ್ರತಿವಾದಿಗಳಾದ ಡಿವಿಜನಲ್ ಕಂಟ್ರೋಲರ್ ಕೆ.ಎಸ್.ಆರ್.ಟಿ.ಸಿ. ಇವರ ಬಸ್‌ನಲ್ಲಿ ಕಂಡಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1488

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಬಿಎಲ್‌ಆರ್: ಸಿಆರ್-173/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

ಶ್ರೀ ಮತಿ ಲಾಲಮ್ಮ ಕೋಂ ಲೇ: ದುರುಗಪ್ಪ, ಮತ್ತಿತರ 5 ಜನರು.
ಎಲ್ಲರ ವಾಸ: ಉಬ್ಬಲಗುಂಡಿ ಗ್ರಾಮ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.

**ಪ್ರತಿವಾದಿಗಳು**

1) ಶ್ರೀ ಫೀರಾ ಬಿನ್ ಕಾಸಿಂ ಸಾಬ್, ಲಾರಿ ಮಾಲೀಕರು, ನಂ.ಕೆಎ.35/ 5352.
ವಾಸ: ಉಬ್ಬಲಗುಂಡಿ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.
2) ಡಿವಿಜನಲ್ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ದ್ವಾರಕ, 2ನೇ ಮಹಡಿ ನಂ.79, ಉತ್ತಮರಗಾಂಧಿ ಸಲ್ಯಾ, ಚನ್ನೈ.

**ಪ್ರಕರಣೆ**

ಶ್ರೀ ಮತಿ ಲಾಲಮ್ಮ ಮತ್ತಿತರ 5 ಜನರು ಇವರು ಮೃತ ದುರುಗಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದುರುಗಪ್ಪ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಪೀರಾ ಬಿನ್ ಕಾಸಿಂಸಾಬ್ ಇವರ ಲಾರಿಯಲ್ಲಿ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1489

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಬಿಎಲ್ಆರ್: ಸಿಆರ್-172/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಜಿ. ಪಾಂಡು, ಬಿನ್ ಜಿ. ರಾಮಯ್ಯ.
2) ಸಾವಿತ್ರಿ ಕೋಂ ಜಿ. ಪಾಂಡು,
ಇಬ್ಬರ ವಾಸ: ಹಾವಂಬಾವಿ, ಬಳ್ಳಾರಿ.

**ಪ್ರತಿವಾದಿಗಳು**

1) ಪಿ. ವಿಜಯ್ ಕುಮಾರ್ ಬಿನ್ ಕೃಷ್ಣಯ್ಯ, ಟೆಂಪೋ ಟ್ರ್ಯಾಕ್ಸ್ ಮಾಲೀಕರು, ನಂ.ಕೆಎ34/ 5850 ಸುಬ್ಬರಾವ್ ಆಸ್ಪತ್ರೆ ಹಿಂಭಾಗ, ಬಳ್ಳಾರಿ.
2) ದಿ ಬ್ರ್ಯಾಂಚ್ ಮ್ಯಾನೇಜರ್ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕರಣೆ**

ಶ್ರೀ ಜಿ. ಪಾಂಡು ಸಾವಿತ್ರಿ ಇವರು ಮೃತ ರವಿಬಾಬು ಇವರ ತಂದೆ ಮತ್ತು ತಾಯಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರವಿಬಾಬು ರವರು ಒಂದನೇ ಪ್ರತಿವಾದಿಗಳಾದ ಪಿ. ವಿಜಯ್‌ಕುಮಾರ್ ಇವರ ಟೆಂಪೋ ಟ್ರ್ಯಾಕ್ಸ್ ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1490

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಬಿಎಲ್ಆರ್: ಸಿಆರ್-171/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

ಶ್ರೀಮತಿ ಆದಿಲಕ್ಷ್ಮಿ ಬಿನ್ ಲೇ: ಶ್ರೀನಿವಾಸ ರಾವ್,
ಮತ್ತಿತರ 3 ಜನರು.
ಎಲ್ಲರ ವಾಸ: ವಾರ್ಡ್ ನಂ.7, ಕಕ್ಕರಲ ಟೋಟಾ ಪೋಸ್ಟ್,
ಬಳ್ಳಾರಿ ಜಿಲ್ಲೆ.

**ಪ್ರತಿವಾದಿಗಳು**

1) ಬಿ.ಎಂ. ಶಿವಪ್ರಸಾದ್ ಬಿನ್ ಅಂಜಿನಪ್ಪ, ಆಯಿಲ್ ಟ್ಯಾಂಕರ್ ಮಾಲೀಕರು, ನಂ.ಕೆಎ-35/ 5670, ವಾಸ: ನಂ.65, ವಾರ್ಡ್ ನಂ.14, ಆಂಜನೇಯ ಟೆಂಪಲ್ ಸ್ಟ್ರೀಟ್ ಪೇಟೆ, ಬಳ್ಳಾರಿ.
2) ಶ್ರೀ ಬಸವರಾಜ್ ಶ್ರೀ ವೀರಭದ್ರೇಶ್ವರ ಎಂಟರ್ ಪ್ರೈಸೆಸ್ ಆಯಲ್ ಫ್ಯಾಕ್ಟರಿ, ಟಿ.ಜೆ. ಕಾಂಪೌಂಡ್, ಕಮಲ ರೋಡ್, ಬಳ್ಳಾರಿ.
3) ಅವಲಪತಿ ಚಿನ್ನ ನಾರಾಯಣಪ್ಪ ಬಿನ್ ಶೇಷಯ್ಯ,
ವಾಸ: ಬಾಪನಾಥ ಪುರಂ ಗ್ರಾಮ: ಅಥಮಕೂರು ತಾಲ್ಲೂಕು, ಕರ್ನೂಲ್ ಜಿಲ್ಲೆ, ಆಂಧ್ರಪ್ರದೇಶ.
4) ಶ್ರೀಮತಿ ಕಾಂತಮ್ಮ ಕೋಂ ಅವಲಪತಿ ಚಿನ್ನ ನಾರಾಯಣಪ್ಪ,
ವಾಸ: ಬಾಪನಾಥಪುರಂ ಗ್ರಾಮ, ಅಥಮಕೂರು ತಾಲ್ಲೂಕು, ಕರ್ನೂಲ್ ಜಿಲ್ಲೆ, ಆಂಧ್ರಪ್ರದೇಶ.

**ಪ್ರಕರಣೆ**

ಶ್ರೀಮತಿ ಆದಿಲಕ್ಷ್ಮಿ ಬಿನ್ ಲೇ: ಶ್ರೀನಿವಾಸ ರಾವ್ ಇವರು ಮೃತ ಎ. ಶ್ರೀನಿವಾಸ ರಾವ್ ಇವರ ಹೆಂಡತಿ ಮತ್ತು ತಂದೆ, ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎ. ಶ್ರೀನಿವಾಸರಾವ್ ರವರು ಒಂದನೇ, ಎರಡನೇ ಪ್ರತಿವಾದಿಗಳಾದ ಬಿ.ಎಂ. ಶಿವಪ್ರಸಾದ್, ಬಸವರಾಜ್, ಇವರ ಆಯಿಲ್ ಟ್ಯಾಂಕರ್ ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1491

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರಕರಣ ಸಂಖ್ಯೆ: ಸಕಾಆದಾ: ಕಾನಪ: ಬಿಎಲ್ಆರ್: ಸಿಆರ್-170/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

ಶ್ರೀಮತಿ ಗೌರಮ್ಮ ಕೋಂ ಲೇ: ಬಸಣ್ಣ,
ವಾಸ: ಅಳ್ಳಿಪುರ, ಬಳ್ಳಾರಿ ಜಿಲ್ಲೆ.

**ಪ್ರತಿವಾದಿಗಳು**

1) ವಿ.ಎಸ್. ಅಂಜಿನಪ್ಪ ಬಿನ್ ಚಿನ್ನ ಅಂಜ್ಜಿನಪ್ಪ, ಟ್ರ್ಯಾಕ್ಟರ್ ಮಾಲೀಕರು, ನಂ.ಎ.ಪಿ.02/ 2714, ಬುಡಗಾವಿ ಗ್ರಾಮ, ಉರ್ವಕೊಂಡ ಮಂಡಲಮ್ ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.

2) ದಿ ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕರಣೆ**

ಶ್ರೀಮತಿ ಗೌರಮ್ಮ ಇವರು ಮೃತ ಬಸಣ್ಣ ಇವರ ಹೆಂಡತಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸಣ್ಣ ರವರು ಒಂದನೇ ಪ್ರತಿವಾದಿಗಳಾದ ವಿ.ಎಸ್. ಅಂಜಿನಪ್ಪ, ಇವರ ಟ್ರ್ಯಾಕ್ಟರ್‌ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1492

**IN THE COURT OF THE ADDITIONAL REGISTRAR OF CO-OPERATIVE SOCIETIES (Indl. & Misc.,) IN KARNATAKA, OFFICE OF THE REGISTRAR OF CO-OPERATIVE SOCIETIES, BANGALORE**

**No. A(I & M)/ D4/ Sur/ 07/ 2004-05**

**Petitioner:** Secretary, Al-fatha Credit Co-operative Society Ltd., Davanagere.

V/s

**Respondent:** 1) Sri K.J. Jayappa S/o Junjappa, Anakonda Tank Bed, Behind Anand High School, Bombu Bazaar Road, Davanagere.

2) Sri Abdul Rehaman S/o Ameer Sab, # 550/ 27, K.R. Road, Davanagere.

3) Shamshuddin Razvi S/o Abdul Sattar Khan, 16th Cross, Azadnagar, Davanagere and 27 Impleaders.

**Notice under Section 103(1) of Karnataka Co-operative Societies Act of 1959**

Whereas the above petitioner has filed an Surcharge application under Section 69 of Karnataka Co-operative Societies Act of 1959 against the Respondents as per the findings of the enquiry report made under Section 64 of the Act, and claimed Rs.89,50,860/- is due. The 2nd Respondent, being the President of the petitioner's society and for his alleged involvement, in illegal transaction, in misutillising and misappropriating the financial assistance sanctioned under Chaithanya Swavalambane Scheme sponsored by Karnataka Backward Class Development Corporation. Besides, petitioner has also filed

I.A. application under Section 103 of Karnataka Co-operative Societies Act of 1959 on 30.01.2006 to attach the immovable properties, belonging to the Respondent Sri Abdul Rehaman S/o Ameer Sab, Davanagere. Earlier notice of attachment of properties under the said section was issued on 17.02.2006. Later as per the objection of the Respondent advocate and argument of the petitioner's advocate is heard on 02.09.2006 and 23.09.2006 the notice issued on 17.02.2006 is withdrawn, as it was not issued under Section 103(1) K.C.S.Act and it is ordered to issue revised notice to 2nd Respondent in this respect.

It is ordered, and attached the immovable properties belonging to 2nd Respondent as Annexered to this notice. Further, notice is ordered to issue to 2nd Respondent Sri Abdul Rehamna S/o Ameer Sab, Davanagere, calling upon him, to furnish adequate security to the extent of the amount shown in Surcharge application filed by the petitioner to the satisfaction of this Court, within 07 (Seven) days from the date of receipt of this notice. Failing which, the attached immovable properties belonging to 2nd Respondent Sri Abdul Rehaman S/o Ameer Sab, Davanagere, will be confirmed, after the expiry of the said period, on the basis of the available evidences, filed by the Petitioner.

This notice issued under my signature and seal of this Court on 23.09.2006.

Additional Registrar of Co-op, Societies,
(Indl. & Misc.,), H.O. Bangalore.

**Annexure- to No. A (I & M)/ D4/ Sur/ 07/ 2004-05**

| Sl. No. | Respondent and his relations | Survey No./ Site No. | Extents/ Khatha No. | Boundaries | | | | Occu pents by. |
|---|---|---|---|---|---|---|---|---|
| | | | | North | South | East | West | |
| 1 | 2 | 3 | 4 | 5 | 6 | 7 | 8 | 9 |
| 1. | Abdul Rehaman S/o Ameer Sab, Door No.550/27, K.R. Road, Davanagere. | 122/2A Site No.629/64 Anekonda Grama, Davanagere. | 7141/98-99, 1-1-1999. 49+50x18 2 Sq. feet. | 30 ft. road | Deven drappa's property | Site No.66 S.J.Sham shudeen Razvi's property. | Site No.64 Mohamed Asif's property. | By tenent |
| 2. | Abdul Rehaman S/o Ameer Sab, Door No.550/27, K.R. Road, Davanagere. | 122/2A Site No.629/65 Anekonda Grama, Davanagere. | 7141/98-99, 1-1-1999. 48+49x16 2 Sq. feet. | 30 ft. road | Deven drappa's property | Site No.66 S.J.Sham shudeen Razvi's property. | Site No.64 Mohamed Asif's property. | By tenent |
| 3. | Abdul Rehaman S/o Ameer Sab, Door No.550/27, K.R. Road, Davanagere. | 122/2A Site No.629/66 Anekonda Grama, Davanagere. | 7141/98-99, 1-1-1999. 47+48x16 2 Sq. feet. | 30 ft. road | Deven drappa's property | Site No.66 S.J.Sham shudeen Razvi's property. | Site No.64 Mohamed Asif's property. | By tenent |
| 4. | Abdul Rehaman S/o Ameer Sab, Door No.550/27, K.R. Road, Davanagere. | Survey No.132/4 Anekonda Grama, Davanagere. | 3.03 Acres land. | Obenahall y Syed Ghouse Sab's property. | Ring Road | R. Survey No.133 Nagamma's land. | R.Survey No.131 Shekharappa's property. | Self |
| 5. | Abdul Rehaman S/o Ameer Sab, Door No.550/27, K.R. Road, Davanagere. | Survey No.8/3C Kasaba Mahajenahally, Harihara Taluk. | 141 0.22 Acres land. | Railway Border. | Alfatha House Building Coop. Society, Davanagere property. | H.K. Shiva nna's property | Dr. Heggade's property. | Self |
| 6. | Abdul Rehaman S/o Ameer Sab, Door No.550/27, K.R. Road, Davanagere. | Survey No.8/3A Kasaba Mahajenahally, Harihara Taluk. | 141 0.03 Acres land. | Railway Border. | Alfatha House Building Coop. Society, Davanagere property. | H.K. Shiva nna's property | Dr. Heggade's property. | Self |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 7. | Abdul Rehaman S/o Ameer Sab, Door No.550/27, K.R. Road, Davanagere. | Survey No.8/3B Kasaba Mahajenahally, Harihara Taluk. | 141 0.18 Acres land. | Railway Border. | Alfatha House Building Coop. Society, Davanagere property. | H.K. Shiva nna's property | Dr. Heggade's property. | Self |
| 8. | Abdul Rehaman S/o Ameer Sab, Door No.550/27, K.R. Road, Davanagere. | Survey No.72 P1, Kasaba, Amaravathi Grama, Harihara Taluk. | 8 2.20 Acres land | Lal Beig's property | Imam Sab's land. | Khaseem Sab's property | Railway's Boarder. | Self |
| 9. | Abdul Rehaman S/o Ameer Sab, Door No.550/27, K.R. Road, Davanagere. | Survey No.72 P3, Kasaba, Amaravathi Grama, Harihara Taluk. | 180 1.10 Acre land. | Lal Beig's property | Imam Sab's land. | Khaseem Sab's property | Railway's Boarder. | Self |
| 10. | Abdul Rehaman S/o Ameer Sab, Door No.550/27, K.R. Road, Davanagere. | Survey No.48P3, Kasaba, Amaravathi Grama, Harihara Taluk. | 180 0.30.08 Acre land. | Imam Sab's Property | T.O. Humsagar's land. | Muddappa Channa basappa's land. | Khaseem Sab's land. | Self |
| 11. | Abdul Rehaman S/o Ameer Sab, Door No.550/27, K.R. Road, Davanagere. | Survey No.90/1, Kasaba, Amaravathi Grama, Harihara Taluk. | 180 1.33 Acre land. | | | | | Self |
| 12. | Abdul Rehaman S/o Ameer Sab, Door No.550/27, K.R. Road, Davanagere. | Survey No.48P1, Kasaba, Amaravathi Grama, Harihara Taluk. | 8 1.20 Acre land. | Haribidari Channaba sappa's property | Khasim Sab's land. | Kannalara Hanumantha ppa's land. | Road | Self |

Additional Registrar of Co-op, Societies,
(Indl. & Misc.,), H.O. Bangalore.

PR-1493

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ನಡವಳಿಕೆಗಳು

**ಸಂಖ್ಯೆ: ಡಿಆರ್‌ಬಿ/ ಆರ್/ ರದ್ಧತಿ/ 3/ 2006-07, ದಿನಾಂಕ:25ನೇ ಸೆಪ್ಟೆಂಬರ್, 2006**

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾಲ್ಲೂಕು ಇದರಲ್ಲಿ ಜರುಗಿದ ಅವ್ಯವಹಾರಗಳ ಕುರಿತು ಆಡಳಿತ ಮಂಡಳಿಯು ಮೇಲಿಂದ ಮೇಲೆ ಲೋಪದೋಷಗಳನ್ನು ಮುಂದುವರಿಸುತ್ತಿದ್ದು, ಇದರಿಂದಾಗಿ ಆಡಳಿತ ಮಂಡಳಿಯನ್ನು ರದ್ದುಗೊಳಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ:18.08.2006, 20.09.2006.

2) ಎಂ. ಚಂದ್ರಶೇಖರ್, ಆಡಳಿತಾಧಿಕಾರಿ, ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು, ಇವರ ಪತ್ರ ದಿನಾಂಕ:18.09.2006.

3) ಅಧ್ಯಕ್ಷರು, ಮಾಗಡಿ ತಾಲ್ಲೂಕು, ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ರವರ ಪತ್ರ ದಿನಾಂಕ:23.09.2006.

4) ಕಾರ್ಯದರ್ಶಿ, ಮಾಗಡಿ ತಾಲ್ಲೂಕು, ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ರವರ ಪತ್ರ ಸಂಖ್ಯೆ: ಟಿಎಪಿಸಿಎಂಎಸ್ ಮಾ: 2006-07, ದಿನಾಂಕ:22.09.2006.

**ಪೀಠಿಕೆ:**

ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು ಈ ಸಂಘದ ಆಡಳಿತ ಮಂಡಳಿಯು ಮೇಲಿಂದ ಮೇಲೆ ಲೋಪದೋಷಗಳನ್ನು ಮುಂದುವರೆಸುತ್ತಿದ್ದ ಕಾರಣ ಸದರಿ ಸಂಘವನ್ನು ಸಹಕಾರ ಸಂಘಗಳ ಕಾಯಿದೆ ಕಲಂ 30 (1) ರಡಿ ರದ್ದುಗೊಳಿಸಿ ಮಾರ್ಗವಿಸ್ತರಣಾಧಿಕಾರಿಗಳು, ಬೆಂಗಳೂರು ಹಾಲು ಒಕ್ಕೂಟ, ಚನ್ನಪಟ್ಟಣ ಶಿಬಿರ ರವರನ್ನು ಆಡಳಿತಾಧಿಕಾರಿಯಾಗಿ ನೇಮಿಸಲಾಗಿದ್ದು, ತದನಂತರ ಸದರಿಯವರು ತಮಗೆ ಆರೋಗ್ಯ ಸರಿ ಇಲ್ಲದ ಕಾರಣ ವೈದ್ಯರ ಸಲಹೆ ಮೇರೆಗೆ ವಿಶ್ರಾಂತಿ ಪಡೆಯಬೇಕೆಂದು ತಿಳಿಸಿದ್ದರಿಂದ ದಿನಾಂಕ:20.09.2006 ರಂದು ಕಾರ್ಯದರ್ಶಿ, ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಾಗಡಿ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕಾತಿ ಮಾಡಲಾಗಿತ್ತು.

ಉಲ್ಲೇಖ (3) ಮತ್ತು (4)ರ ಪತ್ರದಲ್ಲಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಾಗಡಿ ಈ ಸಂಘವು ತಾಲ್ಲೂಕು ಮಟ್ಟದಾಗಿದ್ದು, ಸದರಿ ಸಂಘದಲ್ಲಿ ಬಹಳ ಕೆಲಸ ಕಾರ್ಯಗಳಿದ್ದು, ಇದರಿಂದಾಗಿ ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘದಲ್ಲಿ ಕಾರ್ಯನಿರ್ವಹಿಸಿದಲ್ಲಿ ಸದರಿ ಸಂಘದ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟಾಗುವುದೆಂದು ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರು ತಿಳಿಸಿ, ಆಡಳಿತಾಧಿಕಾರಿಯ ಬದಲಿ ವ್ಯವಸ್ಥೆ ಮಾಡಲು ಕೋರಿರುತ್ತಾರೆ.

ಈ ಅನಿವಾರ್ಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸಂಘದ ಆಡಳಿತಾಧಿಕಾರಿಯನ್ನು ಬದಲಾಯಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 30(1) ಹಾಗೂ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001, ದಿನಾಂಕ:21.11.2001 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಬೈರಾಪಟ್ಟಣ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೈರಾಪಟ್ಟಣ, ಚನ್ನಪಟ್ಟಣ ತಾಲ್ಲೂಕು ಇದರ ಆಡಳಿತಾಧಿಕಾರಿಯಾದ ಕಾರ್ಯದರ್ಶಿ, ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಾಗಡಿ ಇವರನ್ನು ಬದಲಾಯಿಸಿ ಸದರಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಗಡಿ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕಾತಿ ಮಾಡಿದ್ದೇನೆ. ಇವರು ಆಡಳಿತ ಮಂಡಳಿ ನಿರ್ವಹಿಸಬೇಕಾದ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

ಆಡಳಿತಾಧಿಕಾರಿಗಳು ದಿನಾಂಕ:18.08.2006ರ ಆದೇಶದಂತೆ ಆಡಳಿತ ಮಂಡಳಿಗೆ ಚುನಾವಣೆಯನ್ನು ಜರುಗಿಸಲು ಕ್ರಮ ಕೈಗೊಂಡು ನೂತನವಾಗಿ ರಚಿತವಾದ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಿ ವರದಿಯನ್ನು ಸಲ್ಲಿಸಲು ಆದೇಶಿಸಿದ್ದೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:25.09.2006 ರಂದು ಹೊರಡಿಸಿರುತ್ತೇನೆ.

**ಬಿ.ಎಸ್. ಹರೀಶ್**
ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್.1494

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

## ನಂ: ಡಿಆರ್/ ಡಿವಿಜಿ ಎಲ್‌ಕ್ಯೂಡಿ/ ಸಿಆರ್-30/ 2006-07, ದಿನಾಂಕ:27ನೇ ಸೆಪ್ಟೆಂಬರ್, 2006

**ವಿಷಯ:** ಸ್ಥಗಿತಗೊಂಡಿರುವ ಮೈಲಾರಲಿಂಗೇಶ್ವರ ಏತ ನೀರಾವರಿ ಸಹಕಾರ ಸಂಘ ನಿ., ಎಳೆಹೊಳೆ, ಹರಿಹರ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:05.08.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ: ಪತ್ರ ದಿನಾಂಕ:10.08.2006.
3) ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರ ಪ್ರಸ್ತಾವನೆ ದಿನಾಂಕ:15.09.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರು ಸಂಬಂಧಿಸಿದ ನಿರ್ದೇಶಕರಿಗೆ ನೋಂದಣಿ ಅಂಚೆ ಮೂಲಕ ರವಾನಿಸಿದ್ದು, ಅವರ ವರದಿಯನ್ನು ಉಲ್ಲೇಖ (3)ರ ರೀತ್ಯಾ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಮೈಲಾರಲಿಂಗೇಶ್ವರ ಏತ ನೀರಾವರಿ ಸಹಕಾರ ಸಂಘ ನಿ. ಎಳೆಹೊಳೆ, ಹರಿಹರ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.09.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1495

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ನೇತಾಜಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ಜಿಲ್ಲೆ ಇವರನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:26.06.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:14.09.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ನೇತಾಜಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಸಂಘವು ಕೆಲ ವರ್ಷಗಳಿಂದ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಶ್ರೀ ಎನ್.ಜಿ. ರುದ್ರಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ದಿನಾಂಕ:01.09.2006 ರಂದು ಸದರಿ ಸಂಘದ ಅಧ್ಯಕ್ಷರಾದ ಶ್ರೀ ಜಿ.ಎಲ್. ವಿಶ್ವನಾಥ್ ಇವರ ಅಧ್ಯಕ್ಷತೆಯಲ್ಲಿ ಸರ್ವಸದಸ್ಯರ ಸಭೆ ನಡೆಸಿ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಸಂಘದ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಲು ಇಲಾಖಾಧಿಕಾರಿಗಳನ್ನು ಕೋರಲು ಸರ್ವಾನುಮತದಿಂದ ತೀರ್ಮಾನ ಕೈಗೊಂಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಶಿಫಾರಸ್ಸು ಮಾಡಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಗಿನಂತೆ ವರ್ಷವಾರು ಗುರಿ ನಿಗದಿಪಡಿಸಿಕೊಂಡು ಪ್ರಗತಿ ಸಾಧಿಸುವ ಷರತ್ತಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ವರ್ಷವಾರು ಗುರಿ ನಿಗದಿಗೊಳಿಸಿರುವ ವಿವರ** **(ರೂ.ಲಕ್ಷಗಳಲ್ಲಿ)**

| ಕ್ರ. ಸಂ. | ವಿವರ | 2006-07 | 2007-08 | 2008-09 | 2009-10 | 2010-11 |
|---|---|---|---|---|---|---|
| 1. | ಸದಸ್ಯತ್ವ | 500 | 1000 | 1500 | 2000 | 3000 |
| 2. | ಷೇರು | 0.30 | 0.35 | 0.50 | 0.60 | 0.70 |
| 3. | ಪಿಗ್ಮಿ | 0.25 | 0.35 | 0.45 | 0.65 | 0.80 |
| 4. | ಠೇವಣಿ | 0.70 | 1.20 | 1.70 | 2.40 | 3.10 |
| 5. | ಸಾಲ ನೀಡಿಕೆ | 1.50 | 2.00 | 2.50 | 3.00 | 3.55 |
| 6. | ಸಾಲ ವಸೂಲಿ | 1.50 | 1.80 | 2.35 | 2.75 | 3.40 |

### ಆದೇಶ

### ನಂ: ಡಿಆರ್/ ಡಿವಿಜಿ/ ಸಮಾಪನೆ/ ಸಿಆರ್-40/ 2005-06, ದಿನಾಂಕ:29ನೇ ಸೆಪ್ಟೆಂಬರ್, 2006

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಮ್: 2001 ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆ, ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡಿರುವ ನೇತಾಜಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ, ದಾವಣಗೆರೆ ತಾಲ್ಲೂಕು ಇದರ ಉಲ್ಲೇಖ (1)ರ ಸಮಾಪನಾದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಕೆಳಕಂಡ ಷರತ್ತಿಗೊಳಪಟ್ಟು ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

1) ಒಂದು ತಿಂಗಳ ಅವಧಿಯಲ್ಲಿ 500 ಜನ ಸದಸ್ಯರನ್ನಾಗಿ ನೋಂದಾಯಿಸಿಕೊಂಡು ರೂ.1.00 ಲಕ್ಷ ಷೇರು ಸಂಗ್ರಹಣೆ ಮಾಡುವುದು.

2) ಅಕ್ಟೋಬರ್-2006ರ ಮಾಹೆಯಂತ್ಯಕ್ಕೆ ಆಡಳಿತ ಮಂಡಳಿಯನ್ನು ರಚನೆ ಮಾಡುವುದು ಹಾಗೂ ಮಹಾಸಭೆಯನ್ನು ಜರುಗಿಸುವುದು.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ. ಶ್ರೀ ಎನ್.ಜಿ. ರುದ್ರಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಸಂಘದ ನೂತನ ಆಡಳಿತ ಮಂಡಳಿಯನ್ನು ರಚನೆ ಮಾಡಿ ಹಾಗೂ ಸರ್ವಸದಸ್ಯರ ಸಭೆಗೆ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ:29.09.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1496

## ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)
## ಸಹಕಾರ ಸಂಘಗಳ ನಿಬಂಧಕರ ಕಛೇರಿ ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ
## ದಾವಾ ಸಂಖ್ಯೆ: ಅನಿ (ಕೈ.ಇ): ಡಿಐಎಸ್‌ಡಿ-2:817:2005-06

**ಅರ್ಜಿದಾರರು**

1) ವ್ಯವಸ್ಥಾಪಕ ನಿರ್ದೇಶಕರು, ದಾವಣಗೆರೆ ಡಿ.ಸಿ.ಸಿ. ಬ್ಯಾಂಕ್ ನಿ., ದಾವಣಗೆರೆ.

2) ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್, ಬ್ಯಾಂಕ್ ನಿ., ಪಂಪಾ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

3) ವ್ಯವಸ್ಥಾಪಕ ನಿರ್ದೇಶಕರು, ಚಿತ್ರದುರ್ಗ ಡಿ.ಸಿ.ಸಿ. ಬ್ಯಾಂಕ್ ನಿ. ಚಿತ್ರದುರ್ಗ.

4) ವ್ಯವಸ್ಥಾಪಕ ನಿರ್ದೇಶಕರು, ಶಿವಮೊಗ್ಗ ಡಿ.ಸಿ.ಸಿ. ಬ್ಯಾಂಕ್ ನಿ., ಶಿವಮೊಗ್ಗ.

5) ವ್ಯವಸ್ಥಾಪಕ ನಿರ್ದೇಶಕರು, ಬಳ್ಳಾರಿ ಡಿ.ಸಿ.ಸಿ. ಬ್ಯಾಂಕ್ ನಿ., ಹೊಸಪೇಟೆ.

**ಎದುರು ಅರ್ಜಿದಾರರು**

1) ವ್ಯವಸ್ಥಾಪಕ ನಿರ್ದೇಶಕರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ.

## ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ರಂತೆ ಆದೇಶ

ಅರ್ಜಿದಾರರು, ರೂ.25,18,64,250/- ಗಳಿಗೆ, ಎದುರು ಅರ್ಜಿದಾರರಿಂದ ವಸೂಲಿಗೆ ಆದೇಶ ನೀಡಲು ಕೋರಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70 ರಂತೆ ವ್ಯಾಜ್ಯವನ್ನು ದಿನಾಂಕ:27.08.2005ರಂದು ದಾಖಲು ಮಾಡಿರುತ್ತಾರೆ. ಸದರಿ ವ್ಯಾಜ್ಯದ ಅರ್ಜಿಯೊಂದಿಗೆ ಮಧ್ಯಂತರ ಪರಿಹಾರ ಅರ್ಜಿ I.A-I ಯನ್ನು ಸಹ ದಾಖಲು ಮಾಡಿ, ಎದುರು ಅರ್ಜಿದಾರ ವಶದಲ್ಲಿರುವ ಚರಸ್ಥಿರಾಸ್ತಿಗಳನ್ನು ಈ ನ್ಯಾಯಾಲಯ ಆದೇಶ ಹೊರಡಿಸುವ ಮುನ್ನ ಜಪ್ತಿ ಆದೇಶ ಹೊರಡಿಸಲು ವಿನಂತಿಸಿರುತ್ತಾರೆ.

ಅರ್ಜಿದಾರರ ಕೋರಿಕೆಯಂತೆ, ಎದುರು ಅರ್ಜಿದಾರರ ವಶದಲ್ಲಿ ಚರಸ್ಥಿರಾಸ್ತಿಗಳನ್ನು ನ್ಯಾಯಾಲಯದ ಆದೇಶ ಹೊರಡಿಸುವ ಮುನ್ನ ಜಪ್ತಿ ಮಾಡಿಕೊಂಡಿರುವ ಎದುರುಅರ್ಜಿದಾರ ಚರಸ್ಥಿರಾಸ್ತಿಗಳಿಗೆ, ನ್ಯಾಯಾಲಯಕ್ಕೆ ಒಪ್ಪಿಗೆಯಾಗುವಂತೆ ಸೂಕ್ತ ಭದ್ರತೆಯನ್ನು ಹಾಜರುಪಡಿಸಲು ದಿನಾಂಕ:09.11.2005 ರಂದು ನೋಟೀಸು ಜಾರಿಗೊಳಿಸಲಾಗಿತ್ತು. ಸದರಿ ನೋಟೀಸ್‌ಗೆ ಎದುರು ಅರ್ಜಿದಾರರು ದಿನಾಂಕ:07.01.2006ರಂದು ತಮ್ಮ ಆಕ್ಷೇಪಣೆಗಳನ್ನು ದಾಖಲು ಮಾಡಿರುತ್ತಾರೆ. ಅವರ ಆಕ್ಷೇಪಣೆಯಲ್ಲಿ ಎದುರುಅರ್ಜಿದಾರರ ಕಾರ್ಖಾನೆಯಲ್ಲಿ ಸಿಬ್ಬಂದಿಯೊಂದಿಗೆ ವಿವಾದ ಉಂಟಾಗಿ, ಇತ್ಯರ್ಥವಾಗದ ಕಾರಣ, ಅರ್ಜಿದಾರರಿಗೆ ಸಾಲವನ್ನು ತೀರುವಳಿ ಮಾಡಲು ಸಾಧ್ಯವಾಗದೇ ಇರುವುದನ್ನು ನ್ಯಾಯಾಲಯದ ಗಮನಕ್ಕೆ ತಂದು, ಅರ್ಜಿದಾರರ ಕೋರಿಕೆಯಂತೆ ನ್ಯಾಯಾಲಯವು ಮುಟ್ಟುಗೋಲು ಹಾಕಿಕೊಂಡಿರುವ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ಪರಭಾರೆ ಮಾಡುತ್ತಾರೆ ಎಂಬುದಕ್ಕೆ ಯಾವುದೇ ಪುರಾವೆ ಒದಗಿಸಿಲ್ಲದ ಕಾರಣ, ಅರ್ಜಿದಾರರ ಐ.ಎ. ಅರ್ಜಿಯನ್ನು ತಿರಸ್ಕರಿಸಲು ವಿನಂತಿಸಿರುತ್ತಾರೆ.

ಅರ್ಜಿದಾರರ ವಕೀಲರು ದಿನಾಂಕ:29.04.2006ರಂದು ಐ.ಎ. ಅರ್ಜಿಗೆ ಲಿಖಿತವಾದ ದಾಖಲು ಮಾಡಿರುತ್ತಾರೆ. ಅವರ ವಾದದಲ್ಲಿ ಎದುರು ಅರ್ಜಿದಾರರ ಕಾರ್ಖಾನೆಯಲ್ಲಿ ಸಿಬ್ಬಂದಿಯೊಂದಿಗೆ ಉಂಟಾಗಿರುವ ವಿವಾದದಿಂದ ಎದುರುಅರ್ಜಿದಾರರ ವಶದಲ್ಲಿರುವ ಸ್ಥಿರಾಸ್ತಿಯನ್ನು ವಿಲೇವಾರಿ ಮಾಡಿ ಸಿಬ್ಬಂದಿ ಬೇಡಿಕೆ ಪೂರೈಸಲು ನಿರ್ಧರಿಸಿರುವುದನ್ನು ಅರ್ಜಿದಾರರ ಬ್ಯಾಂಕ್‌ಗಳು ಅರಿತು, ಅರ್ಜಿದಾರರು ನೀಡಿರುವ ಸಾಲ ವಸೂಲಿಗೆ ಸೂಕ್ತ ಭದ್ರತೆಯನ್ನು ಪಡೆಯುವ ದೃಷ್ಟಿಯಿಂದ ಎದುರುಅರ್ಜಿದಾರರ ಚರಸ್ಥಿರಾಸ್ತಿಯನ್ನು ನ್ಯಾಯಾಲಯದ ಆದೇಶದ ಮುನ್ನ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆದೇಶವನ್ನು ಸ್ಥಿರೀಕರಿಸಲು ವಿನಂತಿಸಿರುತ್ತಾರೆ.

ಎದುರುಅರ್ಜಿದಾರ ವಕೀಲರು ದಿನಾಂಕ:23.09.2006ರಂದು ವಿಚಾರಣೆಯಲ್ಲಿ ಭಾಗವಹಿಸಿ, ನ್ಯಾಯಾಲಯದ ಪೀಠಾಧಿಕಾರಿಗಳು ಬದಲಾಗಿರುವ ಪ್ರಯುಕ್ತ ಹೊಸದಾಗಿ ವಾದವಿವಾದ ಆಲಿಸಲು ವಿನಂತಿಸಿರುತ್ತಾರೆ. ಉಭಯ ಪಕ್ಷಗಾರರ ವಕೀಲರ ವಾದವಿವಾದಗಳನ್ನು ಆಲಿಸಲಾಗಿದೆ, ಮತ್ತು ಲಿಖಿತ ವಾದ ಅವಲೋಕಿಸಲಾಗಿದೆ. ಈ ವ್ಯಾಜ್ಯದಲ್ಲಿ ಅರ್ಜಿದಾರರು, ದಾಖಲು ಮಾಡಿರುವ ಐ.ಎ. ಅರ್ಜಿಗೆ ಎದುರು ಅರ್ಜಿದಾರರಿಗೆ, ಚರಸ್ಥಿರಾಸ್ತಿ ಮುಟ್ಟುಗೋಲು ಹಾಕಿಕೊಂಡಿರುವುದಕ್ಕೆ ನ್ಯಾಯಾಲಯಕ್ಕೆ ಸೂಕ್ತ ಭದ್ರತೆ ಒದಗಿಸಲು ಆದೇಶಿಸಿ, ದಿನಾಂಕ:09.11.2005 ನೋಟೀಸ್ ನೀಡಲಾಗಿತ್ತು. ಈ ಬಗ್ಗೆ ಎದುರು ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶಗಳನ್ನು ನೀಡಿದರೂ ಸಹ ಯಾವುದೇ ಭದ್ರತೆಗಳನ್ನು ಒದಗಿಸಲು ವಿಫಲರಾಗಿರುತ್ತಾರೆ. ಎದುರು ಅರ್ಜಿದಾರರ ವಾದವನ್ನು ಹೊಸದಾಗಿ ಆಲಿಸುವ ಪ್ರಸಂಗವು ಈ ಹಂತದಲ್ಲಿ ಉದ್ಭವಿಸುವುದಿಲ್ಲದ, ಕಾರಣ ನ್ಯಾಯಾಲಯದ ದಿನಾಂಕ:09.11.2005 ರಿಂದ ಈವರೆಗೆ ಪ್ರತಿವಾದಿಗಳ ಪರವಾಗಿ ಪುಷ್ಟೀಕರಿಸುವ ಯಾವ ದಾಖಲಾತಿಗಳನ್ನು ಅಥವಾ ಚರಸ್ಥಿರಾಸ್ತಿ ಭದ್ರತೆಗೆ ನೀಡುವ ಬಗ್ಗೆ ಮುಂದೆ ಬಾರದಿರುವುದರಿಂದ, ಉದ್ದೇಶಿತ ಜಪ್ತಿ ಮಾಡಿರುವ ಆದೇಶವನ್ನು ಸ್ಥಿರೀಕರಿಸುವುದು ಸೂಕ್ತವಾಗಿರುತ್ತದೆ. ಆದ್ದರಿಂದ ಕೆಳಕಂಡ ಆದೇಶ.

### ಆದೇಶ

ಅರ್ಜಿದಾರರ ಬ್ಯಾಂಕ್, ದಿನಾಂಕ:27.08.2005 ರಂದು ದಾಖಲು ಮಾಡಿರುವ ಕಲಂ 70ರ ವ್ಯಾಜ್ಯದೊಂದಿಗೆ ಕಲಂ 103ರಂತೆ ಮಧ್ಯಂತರ ಪರಿಹಾರದ ಅರ್ಜಿ ಐ.ಎ.ನಂ. 1ಯನ್ನು ಪುರಸ್ಕರಿಸಿದೆ. ಈ ನ್ಯಾಯಾಲಯದಿಂದ ಎದುರು ಅರ್ಜಿದಾರರಿಗೆ ಸೇರಿರುವ ಮತ್ತು ಈ ಆದೇಶದ ಅನುಬಂಧಕ್ಕೆ ಲಗತ್ತಿಸಿರುವ ಚರಾಸ್ಥಿರಾಸ್ತಿಗಳನ್ನು ಡಿಕ್ರಿ ಆದೇಶ ಹೊರಡಿಸುವ ಮುನ್ನಾ ದಿನಾಂಕ:09.11.2005 ರಂದು ನೀಡಿದ ಜಪ್ತಿ ಆದೇಶವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2)ರಂತೆ ಸ್ಥಿರೀಕರಿಸಿದೆ.

ಸದರಿ ಆದೇಶವನ್ನು ಮುಕ್ತ ನ್ಯಾಯಾಲಯದಲ್ಲಿ ದಿನಾಂಕ:23.09.2006 ರಂದು ಘೋಷಿಸಿದೆ.

ಸಹಕಾರ ಸಂಘಗಳ ಅಪರನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

### ಅನುಬಂಧ

**ಭದ್ರ ಸಹಕಾರ ಸಕ್ಕರೆ ಕಾರ್ಖಾನೆ ನಿ., ದೊಡ್ಡಭಾತಿ, ದಾವಣಗೆರೆ ಜಿಲ್ಲೆ ಈ ಕಾರ್ಖಾನೆಗೆ ಸೇರಿದ ಚರಸ್ಥಿರಾಸ್ತಿಗಳ ಪಟ್ಟಿ**

| ಕ್ರ. ಸಂ. | ಭೂಮಿಯ ಸರ್ವೆ ನಂಬರುಗಳು | ಭೂಮಿಯ ವಿಸ್ತೀರ್ಣ | | ಭೂಮಿಯ ಚೆಕ್ಕುಬಂದಿಗಳು | | | |
|---|---|---|---|---|---|---|---|
| | | ಎಕರೆ | ಗುಂಟೆ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 |
| 1. | ನಂ.228:2ಸಿಪಿ | ಸ್ಥಿರಾಸ್ತಿಗಳು 6 | 00 | ನೀಲನಹಳ್ಳಿ ಗ್ರಾಮ | ಭದ್ರಾನಾಲೆ | ಭದ್ರಾನಾಲೆ | ಬಾತಿ ಬೆಟ್ಟ |
| 2. | ನಂ.228:2ಬಿ | 5 | 28 | | | | |
| 3. | ನಂ.228:2ಎ | 4 | 25 | | | | |
| 4. | ನಂ.227:ಪಿ1 | 9 | 37 | | | | |
| 5. | ನಂ.303:ಪಿ1 | 40 | 00 | | | | |
| 6. | ಕ್ರಮ ಸಂಖ್ಯೆ-1 ರಿಂದ 5 ರವರೆಗಿನ ಸರ್ವೆ ನಂ. ದೊಡ್ಡಬಾತಿ ಗ್ರಾಮ, ದಾವಣಗೆರೆ ಜಿಲ್ಲೆಗೆ ಸೇರಿದ್ದು ನಂ.26/1 ಪಿ2 | 4 | 00 | | | | |
| 7. | ನಂ.30/2 | 7 | 15 | | | | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 8. | ನಂ.33/ ಪಿ2 | 2 | 00 | | | | |
| 9. | ನಂ.35 | 13 | 25 | | | | |
| 10. | ನಂ.37 | 17 | 02 | | | | |
| 11. | ನಂ.38/ 1ಪಿ2 | 6 | 08 | | | | |
| 12. | ನಂ. 43/ ಪಿ5 ಕ್ರಮ ಸಂಖ್ಯೆ: 6 ರಿಂದ 12 ರವರೆಗಿನ ಸರ್ವೆ ನಂ. ನೀಲಹಳ್ಳಿ ಗ್ರಾಮ, ಕಸಬಾ ಹೋಬಳಿ, ದಾವಣಗೆರೆ ತಾಲ್ಲೂಕಿಗೆ ಸೇರಿದ್ದು. | 2 | 28 | | | | |
| 13. | ನಂ.11 ಅಗಸನಕಟ್ಟೆ ಗ್ರಾಮ, ಕಸಬಾ ಹೋಬಳಿ, ದಾವಣಗೆರೆ ಜಿಲ್ಲೆ. | 25 | 13 | ಭರ್ಮಪ್ಪ ವಕೀಲರು | ಲಾಡ್ವಾ ನಾರಾಯಣ | ಕುಲಕರ್ಣಿ ವಕೀಲರು | ಲಾಡ್ವಾ ನಾರಾಯಣ |

**ಚರಾಸ್ತಿಗಳು:**

1) ಸಕ್ಕರೆ ಸಂಸ್ಕರಣ ಘಟಕದ ಸ್ಥಾವರ — Sugar Plant
2) ವರ್ಕ್ ಶಾಪ್ ಮೆಷನರಿ — Work Shop Machinery
3) ಬಾಯಿಲರ್ಸ್ ಮತ್ತು ರ್ಯಾಫ್ರಾಕ್ಟರ್ಸ್ — Boiler and Rafractors
4) ಅವೇರಿ ತೂಕದ ಯಂತ್ರ — Avery Weighing scales
5) ಗೋಬರ್ ಅನಿಲ ಸ್ಥಾವರ — Gober Gas Plant
6) ನಿರಂತರ ಸೆಂಟ್ರಿಫ್ಯೂಗ್ಸ್ — Continuous Centrifugas
7) ಎಲ್ಲಾ ಪೀಠೋಪಕರಣಗಳು, ಮೇಜು ಮತ್ತು ಕುರ್ಚಿಗಳು — All Chairs, tables, furnitures
8) ಗಣಕ ಯಂತ್ರ ಪ್ರಿಂಟರ್ಸ್ ಮತ್ತು ಬೆರಳಚ್ಚು ಯಂತ್ರಗಳು — Computers, Printers and Typing Machines.

ಸಹಕಾರ ಸಂಘಗಳ ಅಪರನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್.1497

## ಕೃಷಿ ಮಾರಾಟ ಇಲಾಖೆ
## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು
## ಅಧಿಸೂಚನೆ
### ಸಂಖ್ಯೆ: ಕೃಮಾಇ/ 26/ ಚುನಾವ/ 2005, ಬೆಂಗಳೂರು, ದಿನಾಂಕ:28ನೇ ಸೆಪ್ಟೆಂಬರ್, 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ, 1966ರ ಪ್ರಕರಣ 11ರ ಉಪ ಪ್ರಕರಣ (1) (viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/ 26/ ಚುನಾವ/ 2005, ದಿನಾಂಕ:07.01.2006ರಲ್ಲಿ ಗದಗ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಕಾರ್ಯದರ್ಶಿ, ಕೃಉಮಾಸ, ಶಿರಸಿ ಇವರನ್ನು ನಾಮನಿರ್ದೇಶನ ಮಾಡಲಾಗಿದ್ದು, ಪ್ರಸ್ತುತ ಸದರಿ ಆದೇಶವನ್ನು ಮಾರ್ಪಡಿಸಿ ಮೇಲ್ಕಂಡ ಕಾಯ್ದೆಯ ಪ್ರಕರಣದಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಗದಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಬಹುದಾದ ಅಧಿಕಾರಿಯ ಹೆಸರು ಮತ್ತು ಪದನಾಮ |
|---|---|---|---|
| 1. | ಗದಗ | ಗದಗ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹುಬ್ಬಳ್ಳಿ. |

ಜಿ.ಎಸ್. ನಾರಾಯಣಸ್ವಾಮಿ
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ.

ಪಿ.ಆರ್.1498

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು
## ಅಧಿಸೂಚನೆ
### ಸಂಖ್ಯೆ: ಕೃಮಾಇ/ 181/ ನಿಯವಿ/ 2004, ಬೆಂಗಳೂರು, ದಿನಾಂಕ:29ನೇ ಸೆಪ್ಟೆಂಬರ್, 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಿದ ಅಧಿಸೂಚನೆ ಸಂಖ್ಯೆ: ಕೃಮಾಇ:22: ನಿಯವಿ: 94(1), ದಿನಾಂಕ:18.12.1996 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಯಲ್ಲಿ ಕರ್ನಾಟಕ ಸರ್ಕಾರದ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ರವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗುಂಡ್ಲುಪೇಟೆ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಅನುಸೂಚಿ "ಎ"ರಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣ ಎಂದು ಘೋಷಿಸಿದ್ದರು.

ಗುಂಡ್ಲುಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸಮಿತಿ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಎಕರೆ ಪ್ರದೇಶವನ್ನು ಸಮಿತಿಯು ಸ್ವಾಧೀನಪಡಿಸಿಕೊಂಡು ಅಭಿವೃದ್ಧಿಪಡಿಸಿರುವ ಜಮೀನಿನ ಪ್ರದೇಶವನ್ನು ಸದರಿ ಅಧಿಸೂಚನೆಯಲ್ಲಿ ಘೋಷಿಸಲಾದ ಮಾರುಕಟ್ಟೆ ಪ್ರಾಂಗಣದ ಬದಲಾಗಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಸೀಮಾಬದ್ಧಗೊಳಿಸಿ ಘೋಷಿಸಲು ಈಗ ಉದ್ದೇಶಿಸಲಾಗಿದೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಗುಂಡ್ಲುಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆ ಮೂಲಕ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯಲ್ಲಿ ಮಾರುಕಟ್ಟೆ ಪ್ರಾಂಗಣ ಘೋಷಣೆಗೆ ಸಂಬಂಧಿಸಿದ್ದರ ಮಟ್ಟಿಗೆ ನಿರ್ದಿಷ್ಟಪಡಿಸಿರುವ ಸ್ಥಳವನ್ನು ರದ್ದುಪಡಿಸಿ, ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಎಕರೆ ಪ್ರದೇಶವನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಸೀಮಾಬದ್ಧಗೊಳಿಸಿ "ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಲು ಈ ಮೂಲಕ ಉದ್ದೇಶವನ್ನು ಪ್ರಕಟಿಸಿದ್ದೇನೆ.

**ಅನುಸೂಚಿ**

ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ವ್ಯಾಪ್ತಿಯ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಎಕರೆ ಸೀಮಾಬದ್ಧ ಸ್ಥಳ:

**ಪೂರ್ವಕ್ಕೆ:** ಮೈಸೂರು- ಊಟಿ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212

**ಪಶ್ಚಿಮಕ್ಕೆ:** ಸರ್ವೆ ನಂ.193ರ ಜಮೀನು

**ಉತ್ತರಕ್ಕೆ:** ಸರ್ವೆ ನಂ.214 ಮತ್ತು 215

**ದಕ್ಷಿಣಕ್ಕೆ:** 179, 180, 181 ಹಾಗೂ 182ರ ಜಮೀನು.

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು-01 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಜಿ.ಎಸ್. ನಾರಾಯಣಸ್ವಾಮಿ**
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ.

ಪಿ.ಆರ್.1499

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು

## ಅಧಿಸೂಚನೆ

## ಸಂಖ್ಯೆ: ಕೃಮಾಇ/ 229/ ನಿಯವಿ/ 2006, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್, 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಿದ ಅಧಿಸೂಚನೆ ಸಂಖ್ಯೆ: ಕೃಮಾಇ:246: ನಿಯವಿ: 88(2), ದಿನಾಂಕ:03.01.1991 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರಾಗಿದ್ದ ಶ್ರೀ ಬಿ. ಈಶ್ವರಪ್ಪ ಇವರು ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಮಾರುಕಟ್ಟೆ ಉಪಪ್ರಾಂಗಣವೆಂದು ಘೋಷಿಸಿದ್ದರು;

ಹಾಲಿ ಮಹಾತ್ಮಾಗಾಂಧಿ ಮಾರ್ಕೆಟ್ ಮತ್ತು ಪಾನ್‌ಬಜಾರ್ ಸ್ಥಲದಲ್ಲಿ ಹಣ್ಣು, ಹೂವು ಮತ್ತು ತರಕಾರಿ ಸಗಟು ಮತ್ತು ಕಿರುಕುಳ ವ್ಯಾಪಾರವು ಇಕ್ಕಟ್ಟಾದ ಪ್ರದೇಶದಲ್ಲಿ ನಡೆಯುತ್ತಿದ್ದು, ಸಂಚಾರ ವ್ಯವಸ್ಥೆ ಹದಗೆಟ್ಟಿದ್ದು, ಇದರಿಂದ ಮಾರುಕಟ್ಟೆ ಬಳಕೆದಾರರೆಲ್ಲರಿಗೂ ತುಂಬಾ ಕಿರುಕುಳವಾಗುತ್ತಿರುವುದರಿಂದ, ಅಲ್ಲದೆ ಅಮರಗೋಳ ಮುಖ್ಯ ಮಾರುಕಟ್ಟೆ ಪ್ರಾಂಗಣವನ್ನು ಮೂಲಭೂತ ಸೌಲಭ್ಯಗಳೊಂದಿಗೆ ಅಭಿವೃದ್ಧಿಪಡಿಸಿರುವುದರಿಂದ ಸದರಿ ಸಗಟು ವ್ಯಾಪಾರವನ್ನು ಅಮರಗೋಳ ಮಾರುಕಟ್ಟೆ ಪ್ರಾಂಗಣದಲ್ಲಿ ಪ್ರಾರಂಭಿಸುವ ಉದ್ದೇಶಕ್ಕಾಗಿ ದಿನಾಂಕ:03.01.1991ರ ಅಧಿಸೂಚನೆಯ ಅನುಸೂಚಿಯಲ್ಲಿನ ಸೀಮಾಬದ್ಧ ಸ್ಥಳವನ್ನು ಅಪವರ್ಜಿಸುವುದು ಸೂಕ್ತವೆಂದು ತೀರ್ಮಾನಿಸಲಾಗಿದೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯ ಮೂಲಕ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸೀಮಾಬದ್ಧ ಸ್ಥಳದ ಮಾರುಕಟ್ಟೆ ಉಪಪ್ರಾಂಗಣವನ್ನು ರದ್ದುಪಡಿಸಲು ಉದ್ದೇಶಿಸಿದ್ದೇನೆ.

**ಅನುಸೂಚಿ**

ಹುಬ್ಬಳ್ಳಿ ನಗರ ಪರಿಮಿತಿಯೊಳಗೆ ಇರುವ ಗಾರ್ಡನ್ ಪೇಟೆ, ಎಲೆಪೇಟೆ, ಬೊಮ್ಮಾಪುರ, ಓಣಿ, ಹಿರೇಪೇಟೆ, ತಂಬದವರ ಓಣಿ, ಬೂಸಪೇಟೆ, ಕಂಚಗಾರ ಓಣಿ, ಅಕ್ಕಿ ಹೊಂಡ, ಜವಳಿಸಾಲು, ಬಾರದಾನಗಲ್ಲಿ, ಶೀಲವಂತಗಲ್ಲಿ, ಅಳಗುಂಡಗಿಓಣಿ, ಮಠಪತಿಗಳಲ್ಲಿ, ಸಿಂಪಿಗಲ್ಲಿ, ಗಬ್ಬೂರಗಲ್ಲಿ, ವೀರಾಪುರ ರಸ್ತೆ, ರಾಧಾಕೃಷ್ಣಗಲ್ಲಿ, ವಾಳವೇಕರಗಲ್ಲಿ, ಇಟಗಿ, ಮಾರುತಿಗಲ್ಲಿ, ಬೆಂಡಿಗೇರಿಓಣಿ, ಪಗಡಿ ಓಣಿಗಳನ್ನೊಳಗೊಂಡ ಸೀಮಾಬದ್ಧ ಸ್ಥಳ:

**ಪೂರ್ವಕ್ಕೆ:** ಜೋಳದ ಓಣಿ, ಕಟಗಿ ಪ್ರಧಾನಪ್ಪನ ಓಣಿ, ತೊರವಿಗಲ್ಲಿ.

**ಪಶ್ಚಿಮಕ್ಕೆ:** ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:4

**ಉತ್ತರಕ್ಕೆ:** ಕೌಲ್‌ಪೇಟೆ ವಾಸದ ಮನೆಗಳು, ದೇವಾಲಯ, ಅರಳಿಕಟ್ಟೆ ವಾಸದ ಮನೆಗಳು, ಕುಬಸದಗಲ್ಲಿ, ಜವಳಿಸಾಲು, ದುರ್ಗದ ಬೈಲು ರಸ್ತೆ, ದುರ್ಗದಬೈಲು ಗೌಳಿಗಲ್ಲಿ.

**ದಕ್ಷಿಣಕ್ಕೆ:** ಮಹಲ್ದಾರ ಓಣಿ ವಾಸದ ಮನೆಗಳು, ಪಿಂಜಾರಗಲ್ಲಿ ವಾಸದ ಮನೆಗಳು, ಬಡಿಗೇರಿ ಓಣಿ ವಾಸದ ಮನೆಗಳು.

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು-01 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಜಿ.ಎಸ್. ನಾರಾಯಣಸ್ವಾಮಿ**
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ.

ಪಿ.ಆರ್.1500

## ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ) ಬೆಂಗಳೂರು, ರವರ ನಡಾವಳಿಗಳು

**ವಿಷಯ:** ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ-2003, ಮೈಸೂರು ವಿಭಾಗದ ಚಾಮರಾಜನಗರ ಜಿಲ್ಲೆಯಲ್ಲಿ ಋತುಕಾಲಿಕ ತನಿಖಾ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** ಅ.ಸಾ. ಪತ್ರಸಂಖ್ಯೆ: ಜಂಆ: ಗುವಾ: ಮೈ: ಜಾಗೃತಿ: ಪವ್ಯ/ 1/ 06-07, ದಿನಾಂಕ:19.08.2006.

**ಪ್ರಸ್ತಾವನೆ:**

ಮೈಸೂರು ಹಾಗೂ ಚಾಮರಾಜನಗರ ಜಿಲ್ಲೆಯ ಕೆಲವು ವರ್ತಕರು ಹತ್ತಿ, ತೆಂಗಿನಕಾಯಿ, ಶೇಂಗಾ ಬೀಜ ಮತ್ತು ಇತರೆ ಎಣ್ಣೆ ಕಾಳುಗಳನ್ನು ಅಧಿಕೃತ ತನಿಖಾ ಠಾಣೆಗಳನ್ನು ತಪ್ಪಿಸಿ, ರಾಜ್ಯದ ಗಡಿ ಭಾಗದಲ್ಲಿರುವ ಬಳಸು ದಾರಿಗಳ ಮುಖಾಂತರ ತೆರಿಗೆ ತಪ್ಪಿಸುವ ಉದ್ದೇಶದಿಂದ ನೆರೆಯ ತಮಿಳುನಾಡಿಗೆ ಸಾಗಣೆ ಮಾಡುವವರಿದ್ದಾರೆಂದು ಮತ್ತು ಇದನ್ನು ತಡೆಗಟ್ಟಲು ಪ್ರತಿವರ್ಷದಂತೆ ಈ ಸಾಲಿನಲ್ಲಿಯೂ ಸಹ, ತಾತ್ಕಾಲಿಕವಾಗಿ ತನಿಖಾ ಕೇಂದ್ರಗಳನ್ನು ಸ್ಥಾಪನೆ ಮಾಡಬೇಕಾಗಿದೆಯೆಂದು ಜಂಟಿ ಆಯುಕ್ತರು (ಗು.ವಾ) ಮೈಸೂರು, ರವರು ಅಭಿಪ್ರಾಯಪಟ್ಟಿರುತ್ತಾರೆ. ಅಂತಹ ತಾತ್ಕಾಲಿಕ ತನಿಖಾ ಕೇಂದ್ರಗಳನ್ನು ಸ್ಥಾಪಿಸಲು ಗುಂಡ್ಲುಪೇಟೆ ಮತ್ತು ಚಾಮರಾಜನಗರ ತಾಲ್ಲೂಕಿನ ಮೇಲುಕಾಮನಹಳ್ಳಿ, ಎತ್ತಗಟ್ಟಬೆಟ್ಟ, ಹೊಸಹಳ್ಳಿ, ಬಿಸಲವಾಡಿ, ಬಂದೀಗೌಡನಹಳ್ಳಿ, ಚಿಕ್ಕಹೊಳೆ, ಎಂಬ ಸ್ಥಳಗಳನ್ನು ವಿಶೇಷವಾಗಿ ಹತ್ತಿಯ ಸಾಗಣೆ ಮೇಲೆ ನಿಗಾವಹಿಸಲು ಮತ್ತು ಕೊಳ್ಳೆಗಾಲ ತಾಲ್ಲೂಕಿನ ಬೈಲೂರು, ನಾಲ್ ರೋಡ್, ಮತ್ತು ಶ್ರೀ ಮಲೆ ಮಹದೇಶ್ವರ ಬೆಟ್ಟದ, ಅರಣ್ಯ ತನಿಖಾ ಗೇಟುಗಳಿರುವಲ್ಲಿ, ವಿಶೇಷವಾಗಿ ಶೇಂಗಾ ಮತ್ತು ಇತರೆ ಎಣ್ಣೆ ಕಾಳುಗಳ ಸಾಗಣೆ ಮೇಲೆ ನಿಗಾವಹಿಸಲು ಸ್ಥಳಗಳನ್ನು ಗುರುತಿಸಿ ಆಯ್ಕೆ ಮಾಡಿರುತ್ತಾರೆ. ಜಂಟಿ ಆಯುಕ್ತರ ಕೋರಿಕೆ ಸಮಂಜಸವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ: ವಾತೆಅಆ(ಗು.ಸ.) ವಾತೆಅ/ ಸಿಆರ್-22/ 06-07, ದಿನಾಂಕ:1ನೇ ಸೆಪ್ಟೆಂಬರ್, 2006**

ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 53(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದಂತೆ, ಮೈಸೂರು ವಿಭಾಗದಲ್ಲಿನ ಈ ಕೆಲಕಾಣಿಸಿದ ಸ್ಥಳಗಳಲ್ಲಿ ಋತುಕಾಲಿಕ ತನಿಖಾ ಕೇಂದ್ರ ಸ್ಥಾಪಿಸುವುದು.

**(ಅ) ದಿನಾಂಕ:01.09.2006 ರಿಂದ**

(1) ಮೇಲುಕಾಮನಹಳ್ಳಿ - ಗುಂಡ್ಲುಪೇಟೆ ತಾಲ್ಲೂಕು.

(2) ಎತ್ತಗಟ್ಟಬೆಟ್ಟ - ಚಾಮರಾಜನಗರ ತಾಲ್ಲೂಕು.

(3) ಹೊಸಹಳ್ಳಿ - ಚಾಮರಾಜನಗರ ತಾಲ್ಲೂಕು.

(4) ಬಿಸಲವಾಡಿ - ಚಾಮರಾಜನಗರ ತಾಲ್ಲೂಕು.

(5) ಬಂದೀಗೌಡನಹಳ್ಳಿ - ಚಾಮರಾಜನಗರ ತಾಲ್ಲೂಕು.

(6) ಚಿಕ್ಕಹೊಳೆ - ಚಾಮರಾಜನಗರ ತಾಲ್ಲೂಕು.

**(ಆ) ದಿನಾಂಕ:01.10.2006 ರಿಂದ**

(1) ಬೈಲೂರು - ಅರಣ್ಯ ತನಿಖಾ ಗೇಟ್ ಕೊಳ್ಳೆಗಾಲ ತಾಲ್ಲೂಕು.

(2) ನಾಲ್ ರೋಡ್ - ಅರಣ್ಯ ತನಿಖಾ ಗೇಟ್ ಕೊಳ್ಳೆಗಾಲ ತಾಲ್ಲೂಕು.

(3) ಶ್ರೀ ಮಲೆ ಮಹದೇಶ್ವರ ಬೆಟ್ಟ - ಅರಣ್ಯ ತನಿಖಾ ಗೇಟ್ ಕೊಳ್ಳೆಗಾಲ ತಾಲ್ಲೂಕು.

**ಬಿ.ಎ. ಹರೀಶ್ ಗೌಡ**
ವಾಣಿಜ್ಯ ತೆರಿಗೆ ಆಯುಕ್ತರು,
ಕರ್ನಾಟಕ, ಬೆಂಗಳೂರು.

ಪಿ.ಆರ್.1501

## ಲೋಕೋಪಯೋಗಿ ಇಲಾಖೆ
## ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ -2005
## ಭಾಗ-1

ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಕಛೇರಿಯ ಮಾಹಿತಿ ಹಕ್ಕು ನಿಯಮ- 2005ರ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು (ರಜಾ ದಿನಗಳನ್ನು ಹೊರತು ಪಡಿಸಿ)

2) ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿಗಳು.

| ಕ್ರ. ಸಂ. | ಅಧಿಕಾರಿಗಳು (ಶ್ರೀಯುತರು) | ಪದನಾಮ | ನಿರ್ವಹಿಸುತ್ತಿರುವ ಉಸ್ತುವಾರಿ |
|---|---|---|---|
| 1. | ವಿ.ಎಫ್. ತಿಮ್ಮನಗೌಡರ | ಉಪಮುಖ್ಯ ಇಂಜಿನೀಯರರು-1 | ತಾಂತ್ರಿಕ ಶಾಖೆಯ ಉಸ್ತುವಾರಿ |
| 2. | ಎಂ.ಎನ್. ರಾಮಚಂದ್ರ | ಉಪಮುಖ್ಯ ಇಂಜಿನೀಯರರು-2 | ತಾಂತ್ರಿಕ ಶಾಖೆಯ ಉಸ್ತುವಾರಿ |
| 3. | ಎಸ್.ಎಸ್. ಸುಲಿಗಾವಿ | ತಾಂತ್ರಿಕ ಸಹಾಯಕರು-1 | ತಾಂತ್ರಿಕ ಶಾಖೆಯ ಉಸ್ತುವಾರಿ |
| 4. | ಆರ್.ಸಿ. ಕುಲಕರ್ಣಿ | ತಾಂತ್ರಿಕ ಸಹಾಯಕರು-2 | ತಾಂತ್ರಿಕ ಶಾಖೆಯ ಉಸ್ತುವಾರಿ |
| 5. | ಟಿ.ವಿ. ಜಿತೂರಿ | ತಾಂತ್ರಿಕ ಸಹಾಯಕರು-3 | ತಾಂತ್ರಿಕ ಶಾಖೆಯ ಉಸ್ತುವಾರಿ |
| 6. | ವ್ಹಿ.ಆರ್. ಕುಕನೂರ | ತಾಂತ್ರಿಕ ಸಹಾಯಕರು-4 | ತಾಂತ್ರಿಕ ಶಾಖೆಯ ಉಸ್ತುವಾರಿ |
| 7. | ಎ.ವೈ. ಬೆಂಡಿಗೇರಿ | ತಾಂತ್ರಿಕ ಸಹಾಯಕರು-5 | ತಾಂತ್ರಿಕ ಶಾಖೆಯ ಉಸ್ತುವಾರಿ |
| 8. | ಬಿ.ಜಿ. ಭೂತಿ | ತಾಂತ್ರಿಕ ಸಹಾಯಕರು-6 | ಸಾರಿಗೆ ಕೋಶದ ನಿರ್ವಹಣೆ |
| 9. | ಎನ್.ವಿ. ಶಂಕ್ರಯ್ಯ | ಉಪ ನಿರ್ದೇಶಕರು | ಸಾಂಖ್ಯಿಕ |
| 10. | ಬಿ.ಎಸ್. ಪಠಾಣ | ಲೆಕ್ಕಾಧಿಕಾರಿಗಳು | ಲೆಕ್ಕ ಪತ್ರಗಳ ಮೇಲ್ವಿಚಾರಣೆ |
| 11. | ಕೆ.ಆರ್. ದೇಸಾಯಿ | ನಿಬಂಧಕರು | ಆಡಳಿತ ಶಾಖೆಯ ಮೇಲ್ವಿಚಾರಣೆ |

**ಸಕ್ಷಮ ಪ್ರಾಧಿಕಾರಿ:**

ಶ್ರೀ ಪ್ರಭಾಕರ ಹೆಚ್. ಚಿಣಿ, ಮುಖ್ಯ ಇಂಜಿನೀಯರರು (ಪ್ರಭಾರ)

**ಮೇಲ್ಮನವಿ ಪ್ರಾಧಿಕಾರಿ:**

ಶ್ರೀ ಟಿ. ಸುಕುಮಾರ, ಕಾರ್ಯದರ್ಶಿಗಳು.

**ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.**

ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, 3ನೇ ಮಹಡಿ, ವಿಕಾಸ ಸೌಧ, ಬೆಂಗಳೂರು ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತವೆ.

ಮುಖ್ಯ ಇಂಜಿನೀಯರರ ಪರವಾಗಿ,
ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ.

**ಭಾಗ-2**

**ಈ ಕಛೇರಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಕೈಕೊಳ್ಳಲಾದ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳು:**

1) ಈ ವಲಯವು ಧಾರವಾಡ, ಬೆಳಗಾವಿ, ಬಳ್ಳಾರಿ ಹಾಗೂ ಗುಲಬರ್ಗಾ ಹೀಗೆ ಒಟ್ಟು 4 ವೃತ್ತ ಕಛೇರಿಗಳನ್ನು ಹೊಂದಿರುತ್ತದೆ. ಇದೇ ರೀತಿ ವೃತ್ತಗಳ ಅಡಿಯಲ್ಲಿ ಧಾರವಾಡ, ಗದಗ, ಹಾವೇರಿ, ಕಾರವಾರ, ಬೆಳಗಾವಿ, ಚಿಕ್ಕೋಡಿ, ವಿಜಾಪುರ, ಬಾಗಲಕೋಟೆ, ಬಳ್ಳಾರಿ, ರಾಯಚೂರು, ಕೊಪ್ಪಳ, ಗುಲಬರ್ಗಾ, ಯಾದಗಿರಿ ಹಾಗೂ ಬೀದರ ಹೀಗೆ 14 ವಿಭಾಗ ಕಛೇರಿಗಳನ್ನು ಹೊಂದಿರುತ್ತದೆ. ಒಟ್ಟು 12 ಜಿಲ್ಲೆಗಳಲ್ಲಿ ಕಾರ್ಯವ್ಯಾಪ್ತಿ ಬರುತ್ತದೆ.

**2) ಅಭಿವೃದ್ಧಿ ಹಾಗೂ ನಿರ್ಮಾಣ ಕಾರ್ಯಕ್ರಮಗಳು:**

**I. ಕೇಂದ್ರ ಪುರಸ್ಕೃತ ಯೋಜನೆ:**

ಅ) ಲೆಕ್ಕ ಶೀರ್ಷಿಕೆ 5054 ಕೇಂದ್ರ ರಸ್ತೆ ನಿಧಿ (ಯೋಜನೇತರ) ಅಡಿಯಲ್ಲಿ ರಸ್ತೆ ಸೇತುವೆ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಆ) ಲೆಕ್ಕ ಶೀರ್ಷಿಕೆ 5054 ರಸ್ತೆ ಮತ್ತು ಸೇತುವೆ, ನಬಾರ್ಡ್ ಧನ ಸಹಾಯದ ಅಡಿಯಲ್ಲಿ ರಸ್ತೆ ಮತ್ತು ಸೇತುವೆ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಇ) ಲೆಕ್ಕ ಶೀರ್ಷಿಕೆ 4059 ಲೋಇ ಕೇಂದ್ರ ಪುರಸ್ಕೃತ (ಸಿ.ಎಸ್.ಎಸ್.) ಯೋಜನೆ ಅಡಿಯಲ್ಲಿ ನ್ಯಾಯಾಲಯ ಕಟ್ಟಡ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಈ) ಲೆಕ್ಕ ಶೀರ್ಷಿಕೆ 4216 ಗೃಹ ನಿರ್ಮಾಣ ಕೇಂದ್ರ ಪುರಸ್ಕೃತ (ಸಿ.ಎಸ್.ಎಸ್.) ಯೋಜನೆ ಅಡಿಯಲ್ಲಿ ನ್ಯಾಯಾಲಯದ ವಸತಿ ಗೃಹಗಳ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

**II. ರಾಜ್ಯ ಪುರಸ್ಕೃತ ಯೋಜನೆ:**

ಅ) ಲೆಕ್ಕ ಶೀರ್ಷಿಕೆ 5054 ರಸ್ತೆ ಮತ್ತು ಸೇತುವೆ (ಯೋಜನೆ) ಅಡಿಯಲ್ಲಿ.

(i) ಸೇತುವೆಗಳ ನಿರ್ಮಾಣ.

(ii) ಡಾಂಬರೀಕರಣ.

(iii) ಇತರೆ ರಸ್ತೆ ನಿರ್ಮಾಣ.

(iv) ಸಕ್ಕರೆ ಕಾರ್ಖಾನೆ ವ್ಯಾಪ್ತಿಯಲ್ಲಿನ ರಸ್ತೆಗಳ ಅಭಿವೃದ್ಧಿ.

(v) ರೇಲ್ವೆ ಸುರಕ್ಷತಾ ಕಾಮಗಾರಿ ಹಾಗೂ

(vi) ಬಳ್ಳಾರಿ ಪ್ಯಾಕೇಜ ದಂತಹ ರಸ್ತೆ ಮತ್ತು ಸೇತುವೆ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಆ) ಲೆಕ್ಕ ಶೀರ್ಷಿಕೆ 4059 ಲೋಇ ಯೋಜನೆ ಅಡಿಯಲ್ಲಿ ವಿವಿಧ ಇಲಾಖೆಗಳ ಕಛೇರಿ ಕಟ್ಟಡಗಳ ಹಾಗೂ ಮಿನಿ ವಿಧಾನ ಸೌಧದಂತಹ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಇ) ಲೆಕ್ಕ ಶೀರ್ಷಿಕೆ 4216 ಗೃಹ ನಿರ್ಮಾಣದ ಅಡಿಯಲ್ಲಿ ವಿವಿಧ ಇಲಾಖೆಗಳ ಗೃಹ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಈ) ಲೆಕ್ಕ ಶೀರ್ಷಿಕೆ 4202 ಶಿಕ್ಷಣ ಕಲೆ ಮತ್ತು ಸಂಸ್ಕೃತಿ ಅಡಿಯಲ್ಲಿ ಪದವಿ ಪೂರ್ವ ಉನ್ನತ ಶಿಕ್ಷಣ ಹಾಗೂ ತಾಂತ್ರಿಕ ಶಿಕ್ಷಣ- ಕಟ್ಟಡ ನಿರ್ಮಾಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

**3) ನಿರ್ವಹಣೆ ಮತ್ತು ದುರಸ್ತಿ:**

**(I) ಲೆಕ್ಕ ಶೀರ್ಷಿಕೆ 3054 ರಸ್ತೆ ಮತ್ತು ಸೇತುವೆ (ಯೋಜನೆ)**

ಅ) "ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿ".

ಆ) 12ನೇ ಹಣಕಾಸು ಆಯೋಗದ ಅಡಿಯಲ್ಲಿ ರಸ್ತೆ ಮತ್ತು ಸೇತುವೆಗಳ ನಿರ್ವಹಣೆ ಮತ್ತು ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

(ii) ಲೆಕ್ಕ ಶೀರ್ಷಿಕೆ 2059 ಲೋಇ ಯೋಜನೆ ಅಡಿಯಲ್ಲಿ ಕೆಲವೊಂದು ಸರ್ಕಾರಿ ಚಿಕ್ಕ ಕಟ್ಟಡಗಳ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

(iii) ಲೆಕ್ಕ ಶೀರ್ಷಿಕೆ 2216 ವಸತಿ ಯೋಜನೆ ಅಡಿಯಲ್ಲಿ ವಸತಿ ಗೃಹಗಳ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

(iv) ಲೆಕ್ಕ ಶೀರ್ಷಿಕೆ 2059 ಲೋಇ (ಯೋಜನೇತರ) ಅಡಿಯಲ್ಲಿ ವಿವಿಧ ಇಲಾಖೆಯ ಸರ್ಕಾರಿ ಕಟ್ಟಡಗಳ ನಿರ್ವಹಣೆ ಹಾಗೂ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

(v) ಲೆಕ್ಕ ಶೀರ್ಷಿಕೆ 2216 ವಸತಿ (ಯೋಜನೇತರ) ಅಡಿಯಲ್ಲಿ ವಿವಿಧ ಇಲಾಖೆಯ ಸಾಮಾನ್ಯ ಹಾಗೂ ವಿಶೇಷ ನಿರ್ವಹಣೆ ಮತ್ತು ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.

ಅಲ್ಲದೆ ಇತರೆ ಇಲಾಖೆಗಳ ದುರಸ್ತಿ ಹಾಗೂ ಕಟ್ಟಡಗಳ ನಿರ್ಮಾಣ ಹಾಗೂ ಮೇಲಿನ ಕಾಮಗಾರಿಗಳು ಕೇಂದ್ರ ಹಾಗೂ ಕರ್ನಾಟಕ ರಾಜ್ಯದ ಅನುದಾನ ಹಾಗೂ ಕಾರ್ಯಕ್ರಮಗಳನ್ನು ಹೊಂದಿರುತ್ತವೆ. ಅಸ್ತಿತ್ವದಲ್ಲಿರುವ ಕಾಮಗಾರಿಗಳ ನಿರ್ವಹಣೆ ಹಾಗೂ ದುರಸ್ತಿ, ಇನ್ನಿತರ ಕಾಮಗಾರಿಗಳ ಸಂಬಂಧ ಪಟ್ಟ ಕಾರ್ಯನಿರ್ವಹಿಸುವುದು.

ಮುಖ್ಯ ಇಂಜಿನೀಯರರ ಪರವಾಗಿ,
ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ.

ಪಿ.ಆರ್.1502

# ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

## ನಂ.ಎಲ್ಆರ್ಎಫ್ (ಪೂ) ಸಿ.ಆರ್:05/ 2006-07, ದಿನಾಂಕ:29ನೇ ಸೆಪ್ಟೆಂಬರ್, 2006

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.76 ರಲ್ಲಿನ 1-00 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ) ರವರು ದಾನದ ರೂಪದಲ್ಲಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ), ರಿ.ನಂ.77/3 ಮತ್ತು 77/4 ವಾಗ್ದೇವಿ ವಿಲಾಸ್, ಮುನ್ನೇಕೊಳಲು, ಮಾರತ್ಹಳ್ಳಿ ಅಂಚೆ, ಬೆಂಗಳೂರು-37 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.76ರಲ್ಲಿನ 1-00 ಎಕರೆ ಜಮೀನನ್ನು ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನದ ರೂಪದಲ್ಲಿ ಪಡೆಯಲು ನಮೂನೆ-15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ಮತ್ತು ನಮೂನೆ-15ಎಎ ರಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರು ಸಲ್ಲಿಸಿರುವ ಚೆಕ್ ಲಿಸ್ಟ್‌ನಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್.ಆರ್.ಎಫ್.ಸಿ.ಆರ್: 247: 05-06 ದಿನಾಂಕ:23.01.2006ರಲ್ಲಿ ಪ್ರಸ್ತಾಪಿತ ಮುನ್ನೇಕೊಳಲು ಗ್ರಾಮದ ಸ.ನಂ.76 ರಲ್ಲಿನ 1-00 ಎಕರೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (11) ರಡಿ ಅನುಮತಿ ನೀಡಲು ವರದಿ ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳು, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಕಛೇರಿಯಲ್ಲಿ ನಂ.683/ 2002-2003 ದಿನಾಂಕ:06.03.2003 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಒಪ್ಪಂದ ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.76ರಲ್ಲಿನ 1-00 ಎಕರೆ ಜಮೀನನ್ನು ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ), ರವರಿಗೆ ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ದಾನದ ರೂಪದಲ್ಲಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳವರೆಗೆ ಟ್ರಸ್ಟ್‌ಗೆ ಜಮೀನನ್ನು ಹೊಂದಲು ಅನುಮತಿ ನೀಡುವ ಅಧಿಕಾರ ಜಿಲ್ಲಾಧಿಕಾರಿಗಳಿಗೆ ಕಲ್ಪಿಸಿದೆ. ಅದರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಟ್ರಸ್ಟ್‌ಗೆ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಪ್ರಾಧಿಕಾರದಿಂದ 2 ಯೂನಿಟ್‌ಗಿಂತ ಹೆಚ್ಚಾಗಿ ಟ್ರಸ್ಟ್ ಜಮೀನು ಹೊಂದಲು ಅನುಮತಿ ಪಡೆದುಕೊಂಡಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ಸೇರಿದಂತೆ, ಅಕ್ರಮವೆನಿಸಿದ ದಾಖಲೆಗಳ ಮೂಲಕ ಅನುಮತಿ ಪಡೆದಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
8. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1503

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

## ನಂ.ಎಲ್‌ಆರ್‌ಎಫ್ (ಪೂ) ಸಿ.ಆರ್:06/ 2006-07, ದಿನಾಂಕ:29ನೇ ಆಗಸ್ಟ್, 2006

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.121/1 ರಲ್ಲಿನ 1-30 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ) ರವರು ದಾನದ ರೂಪದಲ್ಲಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ), ರಿ.ನಂ.77/3 ಮತ್ತು 77/4 ವಾಗ್ದೇವಿ ವಿಲಾಸ್, ಮುನ್ನೇಕೊಳಲು, ಮಾರತ್‌ಹಳ್ಳಿ ಅಂಚೆ, ಬೆಂಗಳೂರು-37 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.121/1ರಲ್ಲಿನ 1-30 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನದ ರೂಪದಲ್ಲಿ ಪಡೆಯಲು ನಮೂನೆ-15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ಮತ್ತು ನಮೂನೆ-15ಎಎ ರಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರು ಸಲ್ಲಿಸಿರುವ ಚೆಕ್ ಲಿಸ್ಟ್‌ನಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್.ಆರ್.ಎಫ್.ಸಿ.ಆರ್: 246/ 05-06 ದಿನಾಂಕ:23.01.2006ರಲ್ಲಿ ಪ್ರಸ್ತಾಪಿತ ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.121/1 ರಲ್ಲಿನ 1-30 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (11) ರಡಿ ಅನುಮತಿ ನೀಡಲು ವರದಿ ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳು, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಕಛೇರಿಯಲ್ಲಿ ನಂ.683/ 2002-2003 ದಿನಾಂಕ:06.03.2003 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಒಪ್ಪಂದ ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.121/1ರಲ್ಲಿನ 1-30 ಎಕರೆ:ಗುಂಟೆ ಜಮೀನನ್ನು ಸುಂದರಮ್ಮ ಕೃಷ್ಣಮೂರ್ತಿ ಎಜುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್ (ರಿ), ರವರಿಗೆ ಶೈಕ್ಷಣಿಕ ಚಟುವಟಿಕೆಗಳ ಉದ್ದೇಶಕ್ಕಾಗಿ ದಾನದ ರೂಪದಲ್ಲಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ.ಕಂಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳವರೆಗೆ ಟ್ರಸ್ಟ್‌ಗೆ ಜಮೀನನ್ನು ಹೊಂದಲು ಅನುಮತಿ ನೀಡುವ ಅಧಿಕಾರ ಜಿಲ್ಲಾಧಿಕಾರಿಗಳಿಗೆ ಕಲ್ಪಿಸಿದೆ. ಅದರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಟ್ರಸ್ಟ್‌ಗೆ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳಿದ್ದಲ್ಲಿ ಸಕ್ರಮಗೊಳಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಪ್ರಾಧಿಕಾರದಿಂದ 2 ಯೂನಿಟ್‌ಗಿಂತ ಹೆಚ್ಚಾಗಿ ಟ್ರಸ್ಟ್ ಜಮೀನು ಹೊಂದಲು ಅನುಮತಿ ಪಡೆದುಕೊಂಡಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ಸೇರಿದಂತೆ, ಅಕ್ರಮವೆನಿಸಿದ ದಾಖಲೆಗಳ ಮೂಲಕ ಅನುಮತಿ ಪಡೆದಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
8. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1504

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ

## ಪ್ರಕಟಣೆ

### ಸಂ. ಜಿಸಕ: ಲೆಕ್ಕ: ಕಾಪತ: ಸಿಆರ್-35:2006-2007, ದಿನಾಂಕ:20ನೇ ಸೆಪ್ಟೆಂಬರ್, 2006

**ವಿಷಯ:** ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಗೆ 2006-07ನೇ ಸಾಲಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್-68: ಎಸ್‌ಡಬ್ಲ್ಯೂ-89 ದಿನಾಂಕ:02.11.1990.

(2) ಸರ್ಕಾರದ ಆದೇಶ ಸಂಖ್ಯೆ: ಸಕಇ:349: ಪಕವಿ 2005, ದಿನಾಂಕ:28.01.2006.

2006-2007ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಕಂಡ ನಿಬಂಧನೆಗೆ ಒಳಗೊಂಡಂತೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧದರು ಮಾತ್ರ ಈ ತರಬೇತಿಗೆ ಅರ್ಹರು.
2. ತರಬೇತಿಗೆ 19 (ಹತ್ತೊಂಭತ್ತು) ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಮಹಿಳಾ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.
3. ಅಭ್ಯರ್ಥಿಯು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು ಈ ಕುರಿತು ಅಧಿಕೃತ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
4. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ (2) ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಈ ತರಬೇತಿಗೆ ಅರ್ಹರು.
5. ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷಗಳ ತರಬೇತಿ ನೀಡಲಾಗುವುದು. ಹಾಗೂ ಮಾಹೆಯಾನ ರೂ.1000-00 ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತಲ್ಲಿ ಈ ನಿಬಂಧನೆ ಅನ್ವಯವಾಗುವುದಿಲ್ಲ.
6. ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಅನುಭವವಿರುವ ಖಾಸಗಿ ಹಿರಿಯ ವಕೀಲರಲ್ಲಿ ತರಬೇತಿ ಪಡೆಯಲು ನಿಯೋಜಿಸಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಯು ಸರ್ಕಾರದ ಎಲ್ಲ ನಿಬಂಧನೆಗೆ ಬದ್ಧನಾಗಿರುತ್ತೇನೆ ಎಂದು ಮುಚ್ಚಳಿಕೆಯನ್ನು ಬರೆದುಕೊಡತಕ್ಕದ್ದು.
9. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ಹಾಗೂ ಪ್ರಮಾಣ ಪತ್ರಗಳನ್ನು ಒದಗಿಸಿದಲ್ಲಿ ಶಿಕ್ಷೆಗೊಳಪಡುವುದಲ್ಲದೆ ಅವನು ಪಡೆದುಕೊಂಡ ತರಬೇತಿ ಭತ್ಯೆಯ ಪೂರ್ತಿ ಹಣವನ್ನು ವಾರ್ಷಿಕ ಶೇ.10 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಒಂದು ವೇಳೆ ಬಾಕಿ ವಸೂಲಿ ಉಳಿದಲ್ಲಿ ಭೂ ಕಂದಾಯ ಬಾಕಿ ನಿಯಮಾನುಸಾರ ವಸೂಲು ಮಾಡಲಾಗುವುದು.
10. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಹಾಗೂ ಹೆಚ್ಚಿನ ಮಾಹಿತಿಯನ್ನು ಕಛೇರಿ ನಡೆಯುವ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಬೆಳಗಾವಿ ನೆಹರುನಗರ ಇವರ ಕಛೇರಿಯಲ್ಲಿ ಪಡೆದುಕೊಳ್ಳಲು ಸೂಚಿಸಿದೆ.
11. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ದಿನಾಂಕವನ್ನು ಮತ್ತು ಸ್ಥಳವನ್ನು ತಿಳಿಸಲಾಗುವುದು.
12. ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಪದವಿ ಪರೀಕ್ಷೆ ಹಾಗೂ ಪ್ರಥಮ ದ್ವಿತೀಯ ತೃತೀಯ ವರ್ಷದ ಕಾನೂನು ಪರೀಕ್ಷೆಗಳ ದೃಢೀಕೃತ ಅಂಕಪಟ್ಟಿ ಮತ್ತು ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಜನ್ಮ ದಿನಾಂಕ ಪತ್ರ ಅಥವಾ ಟಿ.ಸಿ. ಮತ್ತು ಬಾರ್ ಅಸೋಸಿಯೇಶನ್‌ನಲ್ಲಿ ಸದಸ್ಯತ್ವ ಪಡೆದ ಬಗ್ಗೆ ಪ್ರಮಾಣ ಪತ್ರ ಲಗತ್ತಿಸಬೇಕು.
13. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:20.10.2006.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬೆಳಗಾವಿ.

ಪಿ.ಆರ್.1505

## COMMERCE AND INDUSTRIES DEPARTMENT

## NOTIFICATION

### No. CI 228 SGF 02, Bangalore, Dated:25th September, 2006

Whereas it is necessary to make an order with a view to enabling The. Krishna Sahakari Sakkare Karkhane (N), Athani Taluk, Belgaum District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, Dated 16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:

**1. Title, Commencement and Duration of Operation:**

i) This Order may be called the Karnataka Sugarcane (Regulation of Distribution) The. Krishna Sahakari Sakkare Karkhane (N), Sankonatti, Athani Taluk, Belgaum District order 2006.

ii) It shall come into force at once and shall remain in force till withdrawn or repealed subject to amendments as the State Government may make from time to time.

**2. Definitions:** In this order:

a. Factory means the premises of the factory at Sankonatti, Owned by The. Krishna Sahakari Sakkare Karkhane (N), Sankonatti, Athani Taluk, Belgaum District, including the precincts of such factory.

b. 'Form' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

3. Determination of the quantity of Sugarcane required by the factory and reservation of the area for supply of sugarcane.

i) The crushing capacity of The. Krishna Sahakari Sakkare Karkhane (N), being 2500 TCD. The quantity of Sugarcane required by the factory during a year is about 4.5 Lakh M.Ts to 5 Lakh M.Ts.

ii) The factory shall secure the sugarcane determined under sub clause (2) from the areas specified in schedule-I to this order which shall be the area reserved temporarily inthe interest of farmers for supplying sugarcane to the factory concerned, till the new factories, likely to come up in that area are established.

**4. Fixation of Quantity of Sugarcane to be supplied by the Grower:**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative society operating in the reserved area, through such society.

**5. Agreement to supply or Purchase the Determined Quantity of Sugarcane:**

Every grower of sugarcane or a sugarcane gower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. Prohibition of export of Sugarcane from Area Reserved Temporarily:**

No. Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. Issue of Permits:**

i. Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forefeited, pass order forfeiting the whole or part of the amount deposited as security.

By Order and in the Name of the Governor of Karnataka,

**P. ANANDA KUMAR**
Desk Officer (Sugar),
Commerce and Industries Department.

**SCHEDULE-I**

Following 14 Villages of Athani Taluk alloted to The. Krishna Sahakari Sakkare Karkhane (N), Sankonatti, Athani Taluk, Belgaum District, temporarily for supply of Sugar Cane.

**Athani Taluk, Belgaum District**

| Sl. No. | Name of the Village. |
|---|---|
| 1. | Satti |
| 2. | Radderatti (Majare Satti) |
| 3. | Halyala |
| 4. | Averkhed |
| 5. | Hulagabali |
| 6. | Ramavadi (Majare Hulgabali) |
| 7. | Karlatti (Majare Hulgabali) |
| 8. | Naganur |
| 9. | Doddavada |
| 10. | Mahishavadagi |
| 11. | Janavada |
| 12. | Darura |
| 13. | Sankonatti (Majare Athani) |
| 14. | Nandeshwara |

**P. ANANDA KUMAR**
Desk Officer (Sugar),
Commerce and Industries Department.

**SCHEDULE-II- FORM-I**
**(SEE CLAUSE 6)**

The Karnataka Sugarcane (Regulation of Distribution) The. Krishna Sahakari Sakkare Karkhane (N), Sankonatti, Athani Taluk, Belgaum District Order 2006.

| | **Permit No.** | **Date:** |
|---|---|---|
| 1. | Full name of the permit holder | : |
| 2. | Father's Name | : |
| 3. | Residential Address in full | : |
| 4. | Quantity of Sugarcane for which permit is granted for export | : |
| 5. | Area and village from which Sugarcane is permitted to be Exported. | : |
| 6. | A. Place to which it is to be exported.<br>B. The purpose for which export is permitted.<br>i. For Sale<br>ii. For crushing sugarcane juice for Manufacture of Gur/ Sakkare Gul/ Jaggery Rabi or Khandasari. | |
| 7. | Their permit is valid up to | : |
| 8. | The permit is granted subject to the following terms and conditions:<br>a) Permit is not transferable.<br>b) The permit shall be produced on demand by an officer authorized by the Deputy Commissioner.<br>c) On expiry of the validity of the permission within 48 hours of the expiry of the validity date the permit shall be surrendered to the permit issuing authority. | : |

Place: Signature of the permit
Date: Issuing Authority.

**SCHEDULE-II- FORM-II**
**(SEE CLAUSE 7)**

The Karnataka Sugarcane (Regulation of Distribution) The. Krishna Sahakari Sakkare Karkhane (N), Sankonatti, Athani Taluk, Belgaum District Order 2006.

Application for the grant of permit for exporting sugarcane from a reserved area.

| | | |
|---|---|---|
| 1. | Full name of the Applicant | : |
| 2. | Father's Name | : |
| 3. | Residential Address in full | : |
| 4. | Quantity of Sugarcane for which permit is requested for export. | : |
| 5. | Area and the village from which Sugarcane is intended to be exported. | : |
| 6. | The purpose for which the export is intended.<br>i. For Sale<br>ii. For Crushing sugarcane Juice or Manufacture of Gur/ Sakkare Gul/ Jaggery Rabi/ or Khandasari for sale or self consumption. | : |

